ದೊರೆ

# ಮಲ್ಲಸರ್ಜನ ದುಂದುಮಿ.

ಸಂಪಾದಕರು:— ಶ್ರೀ. ದೊಡ್ಡಭಾವೆಪ್ಪನವರು ಮೂಗಿ.

" ಭಾರತೀಯ ರತ್ನ ರಣಧೀರ ಕುವರಿ ನೀ ನಿನ್ನ ಬೆಳಕ ನೂಡು |
ಬರಡಾದ ನಾಡ ಮೈಯಲ್ಲಿ ಮಿಂಚಿನ ದೀಪ್ತಿಯನ್ನು ತೀಡು " ||



**Kittur Channamma Rani Itihas Mandal**
**Bailhongal, Bombay-India.**

**೧೯೫೧** **ಬೆಲೆ ೨-೦-೦**

# ಮುನ್ನುಡಿ.

---

ಕಿತ್ತೂರಿನ ವೀರ ಚೆನ್ನಮ್ಮ ರಾಣಿಯ ಪತಿ ಧರ್ಮರಾಜ ವೀರ ಮಲ್ಲಸರ್ಜ ಭೂಪನ ಜೀವಿತವೆಂದರೆ ಆಗಿನ ಮೂರು ನಿಟ್ಟಿನ ಮುಗ್ಗಟ್ಟಿಗೆ ಸಿಕ್ಕುಬಿದ್ದ ಕಷ್ಟಮಯ ಕರ್ನಾಟಕದ ಕರುಣಕಥೆಯ ಪ್ರತಿಬಿಂಬವೇ ಆಗಿದೆ. ಇತ್ತ ಟೀಪುವಿನ ಅಬ್ಬರ, ಅತ್ತ ಪೇಶ್ವೆಯವರ ಒತ್ತಡ ಮೇಲೆ ಇಂಗ್ಲಿಷರ ನಿಗ್ಗರ.

ಮಲ್ಲಸರ್ಜ ಭೂಪ ಮೊದಲಿಗೆ ಟೀಪುವಿನ ಕೈಸೆರೆಯಾಗಿ ಬೂದಿಯೂ ಹಿಟ್ಟೂಕೂಡಿದ ಕಾಡು ಕೂಳನ್ನು ತಿಂದು ಕೊನೆಗೆ ಕಾರಾಗೃಹದ ಕಾವಲುಗಾರರನ್ನು ಕತ್ತರಿಸಿ ಪಾರಾಗಿ ಕಡುಕಷ್ಟದಿಂದ ಕಿತ್ತೂರ ಸೇರಿದನು. ಧರ್ಮಪರಾಯಣನಾಗಿ, ಪ್ರಜೆಗಳ ಪ್ರೇಮಕ್ಕೆ ಪಾತ್ರನಾಗಿ ಧರ್ಮದರ ಸೊತ್ತಿಗೆ ಮಾಡುತ್ತಿರುವ ಸುದ್ದಿ ಕೊನೆಯ ಪೇಶ್ವೆಯವರಿಗೆ ಮುಟ್ಟಲು, ಅವರಿಗಿದು ಕಣ್ಣು ಕೀಸರಾಗಿ, ಯಾತ್ರೆಯ ನೆವದಿಂದ ಬಂದು ಫಿತೂರಿಯಿಂದ ಕೈಸೆರೆ ಹಿಡಿದರು. ಪುಣೆಯಲ್ಲಿ ಮೂರು ವರುಷ ಕಾರಾಗೃಹ ಭೋಗಿಸಿ, ದೊರೆಯು ರೋಗಕ್ಕೆ ತುತ್ತಾದ್ದರಿಂದ ಬಿಡುಗಡೆ ಹೊಂದಿದರೂ ಅರಸೊತ್ತಿಗೆಯ ಸುಖವುಣ್ಣುವ ಭಾಗ್ಯಲಭಿಸಲಿಲ್ಲ. ರೋಗ ಹೆಚ್ಚಾಗಿ ದೊರೆಯು ಪರಮಾತ್ಮನ ಪಾದಕ್ಕೆ ಸೇರಿದನು.

ಈ ಭಯಾನಕ ದುರಂತಾನಂತರ ಭೂಪನ ಮೂರು ಮಂದಿ ಮಕ್ಕಳು ಒಬ್ಬರ ಹಿಂದೊಬ್ಬರು ಇಹಲೋಕದ ಯಾತ್ರೆಯನ್ನು ಮುಗಿಸಿದರು. ಭೂಪನಿಗೆ ಟೀಪುವಿನ ಕಾರಾಗೃಹದಿಂದ ಪಾರಾಗುವದಕ್ಕೆ ಗೂಢಚಾರರ ತಂತ್ರಹೂಡಿ ನೆರವಾದ ಹಿರಿಯರಸಿ ಧರ್ಮಸಿರಿ ವೀರ ರುದ್ರಮ್ಮಾಜಿಯವರೂ ಈ ಮೊದಲೇ ಪರಮೇಶ್ವರನ ಪಾದಕ್ಕೆ ಸೇರಿದ್ದರು. ಈಗ ಹಿಂದೆ ಉಳಿದಿದ್ದವರೆಂದರೆ ಕಿರಿಯರಸಿಯರಾದ ರಣಭೈರವಿ ವೀರ ಚೆನ್ನಮ್ಮಾಜಿಯವರು ಹಾಗೂ ಚಿಕ್ಕ ಸೊಸೆ ಸುಖದ ನಿಧಿ ವೀರಮ್ಮಾಜಿ ಮತ್ತು ಜಾನಕಿದೇವಿ ಈ ಮೂವರೆ.

ಇಂಥ ಹೊತ್ತಿನಲ್ಲಿ ಇಂಗ್ಲಿಷರ ಕಡುಕಾಟ. ಕಿರಿಯರಸಿ ತನ್ನ ಸೊಸೆಯು ಉಡಿಯಲ್ಲೊಬ್ಬ ದತ್ತಕದ ಮಗನನ್ನಿರಿಸಿ ಅರಸೊತ್ತಿಗೆಯನ್ನು ಮುಂದರಿಸ ಬೇಕೆಂದರೆ, ಇಂಗ್ಲಿಷರು ಈ ದತ್ತಕವನ್ನು ಸುಳ್ಳುಮಾಡಿ ಸಂಸ್ಥಾನವನ್ನು ನುಂಗಿ ನೀರು ಕುಡಿಯುವ ಕಾರ್ಯಕವನ್ನು ಆರಂಭಿಸಿದರು. ಸ್ವಾಭಿಮಾನಿ ಯಾದ ರಾಣಿಗಿದು ಸಹನವಾಗದ್ದರಿಂದ ಯುದ್ಧಕ್ಕೆ ಕತ್ತಿಯನ್ನು ಹಿರಿದು, ಮೊದಲ ಹೊಡಿತಕ್ಕೇ ಮಹಾಶತ್ರುವನ್ನು ಸೋಲಿಸಿ ಓಡಿಸಿದಳು.

ಆದರೆ ಆಗ ಇಡೀ ರಾಷ್ಟ್ರಕ್ಕೇ ಆವರಿಸಿದ್ದ ಕಾರ್ಮೋಡವು ಕರ್ನಾಟಕದ ಒಂದು ಮೂಲೆಯಲ್ಲಿ ಮಿಂಚುತ್ತಿದ್ದ ಬೆಳ್ಳಿಚುಕ್ಕಿಯನ್ನು ಪುನಃ ನೂರ್ಮಡಿ ಅಬ್ಬರದಿಂದ ಮುಗಿಮುತ್ತಿ ಕತ್ತಲೆಗವಿಸಿತು. ಎರಡನೆಯ ಸಲ ಕರ್ನಾಟಕದ ವೀರ ಸಿರಿಯಾದ ತಾಯಿ ಚೆನ್ನಮ್ಮ ರಾಣಿಯು ನಿರುಪಾಯಳಾಗಿ ಇಂಗ್ಲಿಷರ ಕೈಸೆರೆಯಾದಳು. ಅತ್ತೆ ಸೊಸೆಯರನ್ನು ವೈರಿಗಳು ಬೈಲಹೊಂಗಲದ ಕೋಟೆಯಲ್ಲಿ ಭೀಮಕಾವಲಿನಲ್ಲಿಟ್ಟರು.

ಆದರೂ ಕಿತ್ತೂರಿನ ವೀರ ತೇಜವು ಅಡಗಲಿಲ್ಲ. ರಾಣಿಯ ಸ್ವಾಮಿನಿಷ್ಠ ಸೇವಕರು ಶತ್ರುಗಳಿಗೆ ಕೈ ತೊಳೆದುಕೊಂಡು ಬೆನ್ನುಹತ್ತಿದರು. ಕಡುಗಲಿಯಾದ ಸಂಗೊಳ್ಳಿಯ ರಾಯಣ್ಣನು ಇಂಗ್ಲಿಷರ ಕಚೇರಿಗಳನ್ನು ಸುಟ್ಟನು. ಅವರ ಆಳಿಕೆಗೊಳಗಾದ ಊರುಗಳನ್ನು ಸುಲಿದನು. ಸೈನಿಕರ ಶಸ್ತ್ರಗಳನ್ನು ತಂತ್ರದಿಂದ ಕಸಿದುಕೊಂಡನು.

ಇಂಗ್ಲಿಷರು ಭೇದನೀತಿಯನ್ನು ಆರಂಭಿಸಿದರು. ಚಿಕ್ಕ ವಯಸ್ಸಿನ ಚೊಕ್ಕು ಬಾಳಿನ ಪುಣ್ಯವತಿಯಾದ ವೀರಮ್ಮಾಜಿಯವರನ್ನು ಹೊಂಗಲ ಬಿಡಿಸಿ ಹುಬ್ಬಳ್ಳಿಯ ಬಳಿ ಕುಸುಗಲ್ಲಿನ ಕಾರಾಗೃಹದಲ್ಲಿರಿಸಿದರು. ಇದರಿಂದ ರಾಯಣ್ಣನ ದಾಳಿ ನಿಂತೀತೆಂದು ಅವರ ಎಣಿಕೆ.

ಆದರೆ ಅದೇನೂ ನಿಲ್ಲಲಿಲ್ಲ. ಮುಂದೆ ಅಲ್ಪ ಅವಧಿಯಲ್ಲಿಯೇ ಆತನನ್ನು ಮೋಸದಿಂದ ಕೈಸೆರೆ ಹಿಡಿಯಬೇಕಾಯಿತು. ನಂದಗಡದಲ್ಲಿರುವ ಆತನ ಪುಣ್ಯ ಸಮಾಧಿಗೆ ಇಂದಿಗೂ ಮಕ್ಕಳಿಲ್ಲದ ಹೆಣ್ಣುಮಕ್ಕಳು ತಮಗೆ ಮಕ್ಕಳಾಗಬೇಕೆಂದು ಹರಕೆ ಹೊರುತ್ತಿರುವದನ್ನೂ, ರೈತರು ತಮ್ಮ ಧಾನ್ಯದ

ಬಂಡಿಗಳನ್ನು ಹುಲುಸಿಗಾಗಿ ಆ ಸಮಾಧಿಯ ಬಳಿ ನಿಲ್ಲಿಸಿ ನಮಸ್ಕಾರ ಮಾಡುತ್ತಿರುವುದನ್ನೂ ನೋಡಿದರೆ ವೀರ ಶಿಖಾಮಣಿ ಸಂಗೊಳ್ಳಿಯ ರಾಯಣ್ಣನ ದಾಳಿಯು ಎಂಥಾ ಪವಿತ್ರವಾದ ಸ್ವಾಮಿನಿಷ್ಠೆಯಿಂದ ಕೂಡಿದ ಧರ್ಮಸಂಪತ್ತಾಗಿದ್ದಿತೆಂಬುದು ಸಹಜವಾಗಿ ತಿಳಿಯುವದು.

ವೀರರಾಣಿಯ ಪವಿತ್ರಜೀವಿತಳಾದ ಸೊಸೆಯು ಕುಸುಗಲ್ಲಿನ ಕಾರಾಗೃಹ ಸೇರಿದೊಡನೆಯೆ ಊಟ ಉಡಿಗೆಯನ್ನೇ ತೊರೆದು ಸೊರಗಿ ಸಣ್ಣಾಗಿ ನೆಲ ಹಿಡಿಯಲು ಇಂಗ್ಲಿಷರು ಅವಳನ್ನು ಬಿಟ್ಟರು. ಆದರೆ ಆ ಪುಣ್ಯಶೀಲೆಯು ಪೃಥ್ವಿಯ ಮೇಲೆ ಬಹಳ ದಿವಸ ಉಳಿಯಲಿಲ್ಲ. ತುಸು ದಿನಗಳಲ್ಲಿಯೇ ಧಾರವಾಡದಲ್ಲಿ ಪರಮೇಶ್ವರನ ಪಾದಕ್ಕೆ ಸೇರಿದಳು.

ಬೈಲಹೊಂಗಲದಲ್ಲಿ ತಾಯಿ ವೀರ ಚೆನ್ನಮ್ಮ ರಾಣಿಯೂ ಜಾನಕಾದೇವಿಯವರೂ ಐದು ವರುಷಗಳ ಕಾರಾಗೃಹವಾಸದ ಅನಂತರ ಕ್ರಿಸ್ತಶಕದ ೧೮೨೯ ನೆಯ ಇಸವಿಯ ಫೆಬ್ರುವರಿ ಎರಡನೆಯ ತಾರೀಖಿನ ದಿವಸ ಸ್ವರ್ಗಯಾತ್ರೆಯನ್ನು ಬೆಳಸಿ, ಕರ್ನಾಟಕಕ್ಕೆ ಎಂದೆಂದಿಗೂ ಅಗಲದ ಜ್ಯೋತಿಯಾಗಿ ಕನ್ನಡ ನಾಡಿನ ಅಚ್ಚ ಆಕಾಶದಲ್ಲಿ ಅಮರ ಆತ್ಮಸ್ವರೂಪದಿಂದ ನೆಲಿಸಿದರು. ಇವರ ಮರಣದ ನಂತರಾ ಸ್ವಲ್ಪಕಾಲದಲ್ಲಿಯೇ ಜಾನಕಿದೇವಿಯವರೂ ಸ್ವರ್ಗವಾಸಿಗಳಾದರು. ಓಂ ಜಯ ಮಹಾತಾಯೀ ಓಂ ಜಯ !

ಕಿತ್ತೂರ ಸಂಸ್ಥಾನವು ಇಂದಿಗೆ ಉಳಿದಿರಲಿಕ್ಕಿಲ್ಲ, ಇಷ್ಟೇ ಏಕೆ? ಕಿತ್ತೂರನ್ನು ನುಂಗಿ ನೀರು ಕುಡಿಯಲೆಳಸಿದ ಟೇಪು-ಪೇಶ್ವೆ-ಇಂಗ್ಲಿಷರೇ ಈ ಪೊತ್ತು ಹೇಳಹೆಸರಿಲ್ಲದೆ ಹೋಗಿರುವಾಗ, ಹಾಗೂ ಉಳಿಯಬೇಕೆಂದು ಹಾಗೂ ಹೀಗೂ ಜೀವ ಹಿಡಿದುಕೊಂಡಿದ್ದ ಏಳು ನೂರು ಸಂಸ್ಥಾನಗಳೇ ಇಂದು ಉರುಳಿ ಹೋಗಿರುವಾಗ, ಎಂದಿಗೂ ಅಳಿಯದ ಅಮರ ಕೀರ್ತಿಯನ್ನು ಗಳಿಸಿದ ಕಿತ್ತೂರೇ ನಿಜವಾಗಿ ಅಜರಾಮರವಾಗಿ ಉಳಿದಂತಾಗಲಿಲ್ಲವೇ? ಕನ್ನಡಿಗರಿಗೆ ನಾಳಿನ ಸಿರಿಗೆ ಮಾರ್ಗದರ್ಶಕರಾಗಿ ಮಲ್ಲೇಂದ್ರ ಭೂಪನೂ, ಮಹಾ ತಾಯಿ ವೀರ ಚನ್ನಮ್ಮಾಜಿ ರಾಣಿಯೂ ಕನ್ನಡ ನಾಡಿನ ಅಗಾಧ ನೀಲಗಗನದಲ್ಲಿ ಎಂದೆಂದಿಗೂ ಆರದ ಅಮರಜ್ಯೋತಿಗಳಾಗಿ

"ಮುಂದಡಿಯಿಡಿರೆಂದು" ತಮ್ಮ ನಾಡ ಮಕ್ಕಳಿಗೆ ವೀರ ಮಂತ್ರವನ್ನು ಉಪದೇಶಿಸುತ್ತಲಿರುವರಲ್ಲವೆ? ಇದೇ ನಿಜವಾದ ಜಯ, ಇದೇ ದಿಟವಾದ ಸ್ವರಾಜ್ಯ !! ಇದೇ ಎಂದೆಂದಿಗೂ ಮರೆಯದ ವೀರ ಸಾಮ್ರಾಜ್ಯ!!! ಓಂ

ಕಿತ್ತೂರವರು ಸಂಸ್ಥಾನಿಕರಾಗಿದ್ದರೇ ಅಥವಾ ಬರಿ ದೇಸಾಯರಾಗಿದ್ದರೇ? ಎಂಬುವೊಂದು ಐತಿಹಾಸಿಕ ಪ್ರಶ್ನೆ ಮುಂಬೈ ಗ್ಯಾಝೆಟಿಯರದ ೨೧ನೆಯ ಸಂಪುಟದ ೪೦೧ ರಿಂದ ೪೦೪೦ ವರೆಗಿನ ಪುಟಗಳಲ್ಲಿ "ಕಿತ್ತೂರ ನಾಡಿನಲ್ಲಿ ೨೮೬ ಊರುಗಳೂ ೭೨ ತೀರ ಚಿಕ್ಕಹಳ್ಳಿಗಳೂ ಇದ್ದವು" ಎಂದು ಇಂಗ್ಲಿಷ ಸರಕಾರದವರೇ ಪ್ರಸಿದ್ಧಿಸಿರುವದರಿಂದ ಇದು ಸಂಸ್ಥಾನವೆಂಬುದು ನಿರ್ವಿವಾದವಾದ ಮಾತು. ಅಲ್ಲದೆ ಇತಿಹಾಸ ಸಂಶೋಧನ ನಿಪುಣರಾದ ಶ್ರೀ. ರಾಜಪುರೋಹಿತರು ತಮ್ಮ "ಕರ್ನಾಟಕ ಇತಿಹಾಸ" ಎಂಬ ಪುಸ್ತಕದಲ್ಲಿ "ಕಿತ್ತೂರ ಸಂಸ್ಥಾನದಲ್ಲಿ ಸುಪ್ರಸಿದ್ಧನಾದ ಮಲ್ಲಸರ್ಜನೆಂಬ ವೀರಶೈವ ಮತದ ಸಂಸ್ಥಾನಿಕನು ಕ್ರಿ. ವ. ೧೭೮೨ರಲ್ಲಿ ಸಿಂಹಾಸನವನ್ನೇರಿ ೩೪ ವರ್ಷ ಉತ್ತಮ ರೀತಿಯಿಂದ ರಾಜ್ಯವನ್ನಾಳಿ ಕ್ರಿ. ವ. ೧೮೧೬ ರಲ್ಲಿ ಮರಣ ಹೊಂದಿದನು." ಎಂದು ಸ್ಪಷ್ಟವಾಗಿ ಕಿತ್ತೂರವರಿಗೆ ಸಂಸ್ಥಾನಿಕರೆಂದು ಹೇಳಿದ್ದಾರೆ. ಮೊದಲಿಗೆ ಈ ಮನೆತನದವರು ಕೆಲವೇ ಗ್ರಾಮಗಳ ಒಡೆಯರಾಗಿದ್ದರೂ ಮಧ್ಯದಲ್ಲಿ ಎರಡು ಮೂರು ತಾಲೂಕುಗಳಷ್ಟು ಪ್ರದೇಶವನ್ನು ಆಕ್ರಮಿಸಿದ್ದರೆಂದು ಗ್ಯಾಝೆಟಿಯರೇ ಹೇಳುತ್ತದೆ. ಈ ಬಗೆಗೆ ಐತಿಹಾಸಿಕರು ಇನ್ನೂ ಹೆಚ್ಚಿಗೆ ಸಂಶೋಧಿಸಲಿ. ಈ ಬಗ್ಗೆ ಇತಿಹಾಸ ಮಂಡಲದಲ್ಲಿ ಅನೇಕ ಕಾಗದಪತ್ರಗಳಿದ್ದು ಅವುಗಳಲ್ಲಿ "ಕಿತ್ತೂರ ರಾಜ್ಯದಲ್ಲಿ ೧೪ ಕರ್ಯಾತು [ಡಿಸ್ಟ್ರಿಕ್ಟ್ಸ್] ಗಳು ಇದ್ದವು" ಎಂದು ಹೇಳಲಾಗಿದೆಯಂತೆ. ಇನ್ನು ಮುಂದೆ ಬರಲಿರುವ "ಕಿತ್ತೂರ ರಾಜ್ಯಾಧ್ಯಾಯ" ಎಂಬ ಪುಸ್ತಕದಿಂದ ಈ ವಿಷಯವು ಸ್ಪಷ್ಟವಾಗಬಹುದು.

ಇನ್ನೇನು ಈ ವೀರ ರಾಜರಾಣಿಯರ ದುಮುದುಮೆ (ಲಾವಣಿ) ಯನ್ನು ಬರೆದ ಕವಿಯ ವಿಷಯ. ಈಗ ಈ ದುಮುದುಮೆಗಳ ಹಳೇ ಹೊತ್ತಿಗೆಯು ಸುಮಾರು ೮೦ ವರುಷಗಳ ಹಿಂದೆ (ಶಾಲಿವಾಹನ ಶಕ ೧೭೯೨ರಲ್ಲಿ) ಪ್ರತಿ ಮಾಡಿದ್ದಾಗಿದೆ. ಆದ್ದರಿಂದ ಮೂಲ ದುಮುದುಮೆಯು ಅದಕ್ಕಿಂತ ಕೆಲವು

ವರ್ಷ ಮುಂಚೆಯೇ ರಚಿತವಾಗಿರಬೇಕೆಂಬುದು ನಿರ್ವಿವಾದದ ಮಾತಾಗಿದೆ. ತಾಯಿ ವೀರ ಚೆನ್ನಮ್ಮಾಜಿ ರಾಣಿಯವರು ಪರಮಾತ್ಮನ ಪಾದಕ್ಕೆ ಹೋದದ್ದು ಇಂದಿಗೆ ಸರಿಯಾಗಿ ೧೨೦ ವರುಷಗಳ ಹಿಂದೆ. ಆದ್ದರಿಂದ ೧೨೦ ಮತ್ತು ೮೦ ಇವುಗಳ ಮಧ್ಯಂತರದ ೪೦ ವರುಷಗಳ ಅವಧಿಯಲ್ಲಿ ಯಾವಾಗಲೋ ಈ ಹಾಡು ರಚಿಸಲ್ಪಟ್ಟಿರಬೇಕೆಂದು ಊಹೆಗೆ ಅನಿಸುವುದು ಸ್ವಾಭಾವಿಕವಷ್ಟೇ? ಹೇಗೆಂದರೆ, ಒಂದು ನೂರು ವರುಷಗಳ ಹಿಂದೆ ಇದು ರಚಿತವಾಗಿದೆಯೆಂದು ಐತಿಹಾಸಿಕ ರೀತಿಯಿಂದ ನಿರ್ಧರಿಸಲಿಕ್ಕೆ ಏನು ಅಡ್ಡಿ? ಆದರೆ ಇನ್ನೂ ಸೂಕ್ಷ್ಮವಾಗಿ ವಿಚಾರ ಮಾಡಿದರೆ, ಕವಿಯು ೧೨೦ ವರುಷಗಳ ಮುಂಚೆ ಪ್ರತ್ಯಕ್ಷವಾಗಿ ಕಿತ್ತೂರಿನ ಚರಿತ್ರೆ ನಡೆದಾಗಲೇ ಇದ್ದನೆಂದು ಸಿದ್ಧಮಾಡಲಿಕ್ಕೆ ಬರುವಂತಿದೆ. ಹೇಗೆಂದರೆ— ಮೊದಲನೆಯ ದೊಡ್ಡ ದುಮದುಮೆಯ ಕವಿಯು, ಮಲ್ಲಸರ್ಜ ಭೂಪನ ಹಾಗೂ ಆತನ ಮೂವರು ಮಕ್ಕಳ ಮರಣವನ್ನು ವರ್ಣಿಸಿದ್ದರೂ ತಾಯಿ ಚೆನ್ನಮ್ಮ ರಾಣಿಯ ಹಾಗೂ ರಾಣಿಯ ಸೊಸೆಯಾದ ಪುಣ್ಯವತಿ ವೀರಮ್ಮಾಜಿಯ ಕಾರಾಗೃಹವಾಸದ ವರ್ಣನೆಯನ್ನು ಮಾತ್ರ ವರ್ಣಿಸಿದ್ದಾನೆ. ಈ ಇಬ್ಬರೂ ವೀರ ಮಾತೆಯರ ವೀರಸ್ವರ್ಗವನ್ನು ಕುರಿತು ಏನೂ ಹೇಳಿಲ್ಲ. ಇಷ್ಟೇ ಅಲ್ಲ, ವೀರ ಸೇವಕನಾದ ರಾಯಣ್ಣನ ಧೀರ ದಾಳಿಗಳನ್ನು ವರ್ಣಿಸಿರುವನೇ ಹೊರತು ಆತನ ವೀರಸ್ವರ್ಗದ ಸಂಗತಿಯನ್ನು ವರ್ಣಿಸಿಲ್ಲ. ಆದ್ದರಿಂದ ಈ ಮೂವರೂ ವೀರರತ್ನರು ಪೃಥ್ವಿಯ ಮೇಲೆ ಜೀವಿಸಿದ್ದ ಕಾಲದಲ್ಲಿಯೇ ಈ ಕವಿಯು ತನ್ನ ಈ ದುಮುದುಮೆಯನ್ನು ರಚಿಸಿದನೆಂದು ನಿರ್ಧರಿಸಿದರೆ ತಪ್ಪಾಗದು.

ಮೊದಲನೆಯ ದುಮುದುಮೆಯನ್ನು ರಚಿಸಿದ "ಹೊಂಗಲದ ವೃಷಭ" ನ ಮಗನೋ ಶಿಷ್ಯನೋ ಆಗಿರಬಹುದಾದ ಹೆಬ್ಬಳ್ಳಿಯವನಾದ "ಬಸವಸುತ" ಎಂಬವನು ಎರಡನೆಯ ಚಿಕ್ಕ ಲಾವಣಿಯನ್ನು ಬರೆದಿದ್ದು ಆತನು ಅದರಲ್ಲಿ ಪುಣ್ಯವತಿಯಾದ ವೀರಮ್ಮಾಜಿಯ ಮರಣವನ್ನು ವರ್ಣಿಸಿದ್ದಾನೆ. ಆದ್ದರಿಂದ ಆತನು ಆ ಸಂಗತಿ ನಡೆದ ಕಾಲಕ್ಕೆ ಇದ್ದನೆಂದು ಊಹಿಸಬಹುದಾಗಿದೆ. ಆದ್ದರಿಂದ ಈ ಎರಡೂ ದುಮುದುಮೆಗಳು ಕಿತ್ತೂರಿನ ಎಂದೂ ಮರೆಯದ ಚರಿತ್ರೆಗಳು ಪ್ರತ್ಯಕ್ಷವಾಗಿ ನಡೆದ ಸಮಯದಲ್ಲಿಯೇ ರಚಿಸಲ್ಪಟ್ಟವುಗಳಾಗಿವೆಯೆಂಬುದು ಕರ್ನಾಟಕಕ್ಕೇ ಹೆಮ್ಮೆಯ ಮಾತಾಗಿದೆ.

ಅಲ್ಲದೆ ಈ ದುಮದುಮೆಗಳಲ್ಲಿ ಒಂದಾದರೂ ಅಬದ್ಧ ಶಬ್ದವಾಗಲಿ, ಬೀಭತ್ಸ ವರ್ಣನೆಯಾಗಲಿ ಹುಡುಕಿದರೆ ಸಹ ಸಿಕ್ಕದಿರುವುದು ಕಿತ್ತೂರಿನ ರಾಜಪ್ರಜೆಗಳೆಲ್ಲರ ನಿಷ್ಕಲಂಕ ಧಾರ್ಮಿಕ ಜೀವನದ ಉಜ್ವಲದ್ಯೋತಕ ವಾಗಿದ. "ಯಥಾ ರಾಜಾ ತಥಾ ಪ್ರಜಾ."

ಇದಲ್ಲದೆ ಈಗ ದೇಶದಲ್ಲಿ ಶೃಂಗಾರ ಲಾವಣಿ ಮೊದಲಾದವುಗಳ ಮೇಲೆ ಆಸ್ಥೆ ಉಳಿಯದೆ, ಐತಿಹಾಸಿಕ ವೀರರಸದ ಲಾವಣಿಗಳು ಬೇಕೆಂಬ ಹಸಿವೆ ಹೆಚ್ಚಾಗ ತೊಡಗಿದೆಯೆಂಬುದು ಎಲ್ಲರಿಗೂ ಅನಿಸಿದ ಮಾತು. ಸರಿ ಯಾಗಿ ಇಂಥ ಹೊತ್ತಿಗೆ ಬೈಲಹೊಂಗಲದ "ಕಿತ್ತೂರ ಚೆನ್ನಮ್ಮರಾಣಿ ಇತಿಹಾಸ ಮಂಡಲ" ದಿಂದ ಇಂಥ ಐತಿಹಾಸಿಕ ವೀರರಸದ ಲಾವಣಿಗಳು ಒಂದರ ಹಿಂದೊಂದು ಪ್ರಕಟವಾಗಹತ್ತಿದ್ದು ನಮ್ಮ ನಾಡಿನ ಭಾಗ್ಯವೇ ಸರಿ.

ಇನ್ನು ಈ ದುಮದುಮೆಯನ್ನು ಸಂಗ್ರಹಿಸಿದ ಶ್ರೀ. ದೊಡ್ಡಭಾವೆಪ್ಪ ನವರು ಮೂಗಿ ಇವರ ವಿಷಯಕ್ಕೆ ಒಂದೆರಡು ಮಾತುಗಳನ್ನು ಹೇಳುವುದು ಅವಶ್ಯವಾಗಿದೆ. ಇವರು ತಮ್ಮ ಇಡೀ ಜೀವನವನ್ನೇ ಕಿತ್ತೂರಿನ ಇತಿಹಾಸಕ್ಕೆ ಸಂಬಂಧಿಸಿದ ಕಾಗದ ಪತ್ರಗಳನ್ನು ಕಲೆಹಾಕುವ, ಹಾಗೂ ಓದಿ ಪರಿಶೋಧಿ ಸುವ ಮಹಾಕಾರ್ಯಕ್ಕೆ ಧಾರೆಯೆರೆದು ಸುಮಾರು ಐದು ಸಾವಿರ ಮಹ ತ್ವದ ಮೂಲ ಕಾಗದಪತ್ರಗಳನ್ನು ಸಂಗ್ರಹಿಸಿದ ವಿಷಯುವನ್ನು ನೆನಿಸಿದರೆ ಇವರು "ಕರ್ನಾಟಕದ ರಾಜವಾಡೆಯವರು" ಎಂದು ಯಾರಿಗಾದರೂ ಅನಿಸುವದು. ಇವರ ಬಾಲಸ್ನೇಹಿತರಾದ ಸಮಾಜ ಸಾಹಿತ್ಯ ಇತಿಹಾಸಗಳ ಅಭಿಮಾನಧನರಾದ ಶ್ರೀ. ಕಲ್ಮೇಶ್ವರ ಸೆಟ್ಟರು, ಹಾಗೂ ರಾಷ್ಟ್ರಕಾರ್ಯ ಧುರೀಣರೂ ಸಾಹಿತ್ಯ ಇತಿಹಾಸಗಳ ಪ್ರಚಾರ ಕಾರ್ಯ ತತ್ಪರರೂ ಆದ ಶ್ರೀ. ತಲ್ಲೂರ ರಾಯನಗೌಡರು ಈ ಗಂಗಾ ಯಮುನಾ ಸರಸ್ವತೀ ಸಂಗಮವಂತಿರುವ ಬೈಲಹೊಂಗಲದ "ಕಿತ್ತೂರ ಚೆನ್ನಮ್ಮರಾಣಿ ಇತಿಹಾಸ ಮಂಡಲ" ವು ತ್ರಿವೇಣೀ ಸಂಗಮ ಸ್ಥಲದಲ್ಲಿರುವ ಐತಿಹಾಸಿಕ ಪ್ರಯಾಗ ಕ್ಷೇತ್ರವೋ ಏನೋ ಎಂದು ಯಾರಿಗಾದರೂ ಅನಿಸದಿರದು.

ಈ ಪುಣ್ಯ ನದಿಗಳ ಬೆಲೆಯನ್ನು ಹೆಚ್ಚಿಸುವ ಮಥುರಾ, ಅಯೋಧ್ಯಾ ಕಾಶಿಗಳಂತೆ ಶ್ರೀ. ಶ್ರೀ. ಕಲ್ಮಠದ ಮಹಾಸ್ವಾಮಿಗಳೂ, ಮಾನ್ಯರಾದ ಶ್ರೀ. ಹಾಲಭಾವಿಯವರೂ, ಮಾನ್ಯರಾದ ಶ್ರೀ. ಬಸವನಾಳರವರೂ, ಶ್ರೀ. ಎಂ. ಪಿ. ವಾಲಿಯವರೂ ಇನ್ನೂ ಅನೇಕ ಮಹನೀಯರೂ ಈ ಇತಿಹಾಸ ಮಂಡಲದ ಮಾರ್ಗದರ್ಶಕರಾಗಿರುವರೆಂಬುದು ಅಭಿಮಾನದ ಸಂಗತಿಯಾಗಿದೆ.

ಇನ್ನೊಂದು ಅತಿ ಮಹತ್ವದ ಸಂಗತಿಯನ್ನು ಹೇಳಿ ನನ್ನೀ ಮುನ್ನುಡಿಯನ್ನು ಮುಗಿಸುವೆನು. ಕನ್ನಡ ನಾಡಿನ ಕೊನೆಯ ಕಿಡಿಯಾದ ವೀರ ಚೆನ್ನಮ್ಮರಾಣಿಯ ಪುಣ್ಯ ಸಮಾಧಿಯು ಧನ್ಯವಾದ ಬೈಲಹೊಂಗಲದಲ್ಲಿಯೇ ಇದೆ. ಆ ದಿವ್ಯ ಸಮಾಧಿಯು ಯಾವ ಪುಣ್ಯಮಂದಿರದಲ್ಲಿದೆಯೋ ಆ ಗುರುಮಠದಲ್ಲಿಯೇ ವೀರ "ಕಿತ್ತೂರ ಚೆನ್ನಮ್ಮ ರಾಣಿ ಇತಿಹಾಸ ಮಂಡಲ" ವಿದೆ. ಆ ಪವಿತ್ರ ಪುಣ್ಯಸ್ಥಲದಿಂದಲೇ ಈ ಪುಸ್ತಕಗಳು ಅಲ್ಲಿಯ ಎಂದೂ ಆರದ ಮಹಾ ಬೆಳಕಿನ ಕಿರಣಗಳಂತೆ ದೇಶದಲ್ಲಿ ಪಸರಿಸುತ್ತಿರುವವು. ಆ ಮಹಾ ತಾಯಿಯ ಬೆಳಕು ಎಲ್ಲೆಡೆಯಲ್ಲಿಯೂ ಪಸರಿಸಲಿ! ಹಾಗೂ ಎಲ್ಲರ ಹೃದಯಗಳಲ್ಲಿ ಹಿಂದಿ ಪವಿತ್ರವಾದ ವೀರ ರಸವನ್ನು ಉಕ್ಕಿಸಲಿ!!

ಜಯ ಮಹಾ ಪುಣ್ಯ ಪ್ರಭು ಮಲ್ಲಸರ್ಜಭೂಪ ಜಯ!

ಓಂ ಜಯ ಮಹಾತಾಯಿ ವೀರ ಚೆನ್ನಮ್ಮ ರಾಣಿ ಜಯ!

ಜಯ ಮಹಾ ಕಿತ್ತೂರ ವೀರ ಸಿರಿ ಜಯ ಜಯ ಜಯ!!

ಓಂ ಜಯ! ಜಯ! ಜಯ!

ಹಲಸಂಗಿ
೧೬-೩-೪೯

ಕನ್ನಡಿಗರ ಕಿಂಕರ
**ಮಧುರಚೆನ್ನ.**

# ಪ್ರಸ್ತಾವನೆ.



ಕಿತ್ತೂರ ಮಲ್ಲಸರ್ಜನ ದುಂದುಮಿಯನ್ನೂ ಮತ್ತು ವೀರರಾಣಿ ಈರವ್ವನ ಲಾವಣಿಯನ್ನೂ ಸಹೃದಯರಾದ ಕನ್ನಡಿಗರ ಕೈಯಲ್ಲಿರಿಸಲು ತುಂಬ ಸಂತೋಷವಾಗುತ್ತದೆ. ನಾನು ಇನ್ನೂ ಚಿಕ್ಕವನಿರುವಾಗಲೇ ಮನೆಯಲ್ಲಿ ಕಿತ್ತೂರಿನ ಗತ ವೈಭವವನ್ನು ಕುರಿತು ಮಾತುಗಳು ನಡೆಯುತ್ತಿದ್ದವು. ದೊರೆ ಮಲ್ಲಸರ್ಜನ ರಾಜ್ಯವೈಭವ, ವೀರರಾಣಿ ಚೆನ್ನಮ್ಮನ ಧೈರ್ಯ, ಪರಾಕ್ರಮ, ಗಂಡುಗಲಿ ಸಂಗೊಳ್ಳಿ ರಾಯಣ್ಣನ ಸ್ವಾತಂತ್ರ್ಯ ಸಂಗ್ರಾಮ, ಮತ್ತು ಇಂಗ್ಲೀಷರ ಕುಟಿಲ ಕಾರಸ್ಥಾನ ಹೀಗೆ ಎಲ್ಲ ಅದ್ಭುತ ರೋಮಾಂಚಕಾರಕ ಸ್ಮೃತಿಗಳು ನನ್ನ ಹೃದಯ ಸಾಗರವನ್ನು ಕಲಕಿದವು. ಅಂದಿನಿಂದಲೇ ಆ ಸಂಸ್ಥಾನದ ಇತಿಹಾಸವನ್ನು ಬೆಳಕಿಗೆ ತರಬೇಕೆಂಬ ಹಂಬಲವು ಎದೆಯಲ್ಲಿ ನೆಲೆಗೊಂಡಿತು. ಅಲ್ಲಿಂದ ಇಲ್ಲಿಯತನಕ ಸುಮಾರು (೩೦) ವರುಷಗಳ ವರೆಗೆ ಕಿತ್ತೂರಿಗೆ ಸಂಬಂಧಿಸಿದ ಕಾಗದ-ಪತ್ರಗಳನ್ನೂ, ತಾಮ್ರ-ಪಟಗಳನ್ನೂ, ಲಾವಣಿ-ದುಂದುಮಿಗಳನ್ನೂ, ಹಾಡು-ಸೋಬಾನುಗಳನ್ನೂ, ಹೀಗೆ ಐತಿಹಾಸಿಕ ಸಾಧನ-ಸಾಮುಗ್ರಿಗಳನ್ನೂ ಹುಡುಕುತ್ತ, ಕಲೆ ಹಾಕುತ್ತ, ಸಂಶೋಧಿಸುತ್ತ ಪರಿಶ್ರಮ ಪಡುತ್ತಿದ್ದೇನೆ. ಹೀಗಾಗಿ ಕಿತ್ತೂರಿನಂಥ ಒಂದು ಸಣ್ಣ ಸಂಸ್ಥಾನದ ಬಗ್ಗೆಯೂ ಅಪಾರವಾದ ಐತಿಹಾಸಿಕ ಸಾಹಿತ್ಯ ದೊರೆತುದು ನಮ್ಮ ನಾಡಿನ ಪೂರ್ವಪುಣ್ಯವೆಂದೇ ಹೇಳಬೇಕು. ನಾನು ಒಬ್ಬಂಟಿಗನಾಗಿ ಐತಿಹಾಸಿಕ ಸಂಶೋಧನೆಯ ಮರುಳುಗಾಡಿನಲ್ಲಿ ತಡವರಿಸುತ್ತಿದ್ದಾಗ ಶ್ರೀ. ಮ. ನಿ. ಪ್ರ. ಸ್ವರೂಪಿಗಳಾದ ಕಲ್ಮಠದ ಚೆನ್ನಬಸವ ಮಹಾಸ್ವಾಮಿಗಳೂ ಮತ್ತು ಶ್ರೀ. ತಲ್ಲೂರ ರಾಯನಗೌಡರು ಮೊದಲಾದವರು ಮುಂದೆ ಬಂದು ಇವುಗಳ ಪ್ರಕಟನೆಗಾಗಿ ಹೆಗಲು ಗೊಟ್ಟರು. ಈಗ ಕನ್ನಡ ನಾಡಿನ ತುಂಬೆಲ್ಲ ಸ್ವಾತಂತ್ರ್ಯ ಸಂಗ್ರಾಮದ ಪುಣ್ಯಕತೆಯು ಮನೆಯ ಮಾತಾಗಿದೆ. ನನ್ನ ದೀರ್ಘ ಪರಿಶ್ರಮವು ಹೀಗೆ ನನ್ನ ಕಣ್ಣು ಮುಂದೆಯೇ ಫಲಕಾರಿಯಾಗುತ್ತಿರುವದು. ಮತ್ತು ನಮ್ಮ ನಾಡಿನ ತರುಣರು ಹೆಚ್ಚೆಚ್ಚಾಗಿ ಮುಂದೆ ಬಂದು ಈ ಕಾರ್ಯದಲ್ಲಿ ಆಸಕ್ತಿ

ವಹಿಸುತ್ತಿರುವದನ್ನು ಕಂಡು ನನಗೆ ಹಿಡಿಸಲಾರದ ಸಂತೋಷವನ್ನು ಕೊಟ್ಟಿದೆ. ಆದ್ದರಿಂದ ಇದರಕ್ಕಿಂತ ಹೆಚ್ಚಿನ ಪ್ರತಿಫಲವನ್ನು ನಾನೇನು ಬಯಸಲಿ?

ಈ ಸಂಕಲನದಲ್ಲಿ ಸೇರಿದ ಒಂದು ದುಂದುಮೀಯೂ ಮತ್ತೊಂದು ಲಾವಣಿಯೂ ಜನಪದ ಸಾಹಿತ್ಯಕ್ಕೆ ಸೇರಿವೆ. ಬಿ. ಎಂ. ಶ್ರೀಕಂಠಯ್ಯನವರು ಇದರ ಬಗ್ಗೆ ಬರೆಯುವಾಗ ' ಜನವಾಣಿ ಬೇರು ಕವಿವಾಣಿ ಹೂವು ' ಎಂದು ಈ ಸಾಹಿತ್ಯದ ಸೂತ್ರವನ್ನೇ ಪ್ರಕಟಿಸಿದ್ದಾರೆ. ಹಳ್ಳಿಯ ಜನರು ಹಬ್ಬ–ಹುಣ್ಣಿಮೆಗಳಲ್ಲಿ, ದೈನಂದಿನ ಕೆಲಸ-ಬೊಗಸೆಗಳಲ್ಲಿ, ಮದುವೆ-ಮುಂಜಿಗಳಲ್ಲಿ ತಮ್ಮ ಹೃದಯ ಸಾಗರದಲ್ಲಿ ಉಕ್ಕಿ ಬರುವ ಭಾವದ ಅಲೆಗಳನ್ನು ಈ ಹಾಡಿನ ಛಂದಗಳಲ್ಲಿ ಹೊರಗೆಡಹುತ್ತಾರೆ. ಇವರು ಸಹಜ ಕವಿಗಳು ಹುಟ್ಟುಗಬ್ಬಿಗರು. ಹೂವಿನಲ್ಲಿ ಕಂಪು ಅಡಗಿದಂತೆ ಚಂದಿರನಲ್ಲಿ ತಂಪು ತುಂಬಿದಂತೆ ಇವರ ಚೊಕ್ಕ ಬಾಳಿನಲ್ಲಿ ಕಾವ್ಯದ ಸೆಲೆಯು ಪುಟಪುಟಿಯುತ್ತದೆ. ಆದ್ದರಿಂದಲೇ ನೃಪತುಂಗನು ಕವಿರಾಜ ಮಾರ್ಗದಲ್ಲಿ ' ಚದುರರ್ ನಿಜದಿಂ, ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್ ' ಎಂದು ನಮ್ಮ ನಾಡವರ ಬಗ್ಗೆ ಅಭಿಮಾನದಿಂದ ನುಡಿದಿದ್ದಾನೆ. ಹೀಗೆ ಇವರ ಸಾಹಿತ್ಯೋಪಾಸನೆಯು ಅನಂತ ಮುಖವಾಗಿ ಅನೇಕರೀತಿಯಾಗಿ ಹೊರಹೊಮ್ಮಿದೆ. ಹೊಮ್ಮುತ್ತಿದೆ. ಹಳ್ಳಿಯಲ್ಲಿ ಬಳಕೆಯಲ್ಲಿರುವ ಗರತಿ ಹಾಡುಗಳು, ಲಾವಣಿಗಳು, ದುಂದುಮಿಗಳು, ಗೀಗೀಪದಗಳು, ಸೋಬಾನಗಳು, ಹೋಳಿಯ ಪದಗಳು ಹೀಗೆ ಅನೇಕ ತೆರನಾದ ಸಾಹಿತ್ಯ ರೂಪಗಳು ಬೆಳೆದು ಬಂದಿವೆ. ಇವು ನಮ್ಮ ಜನಜೀವನದಲ್ಲಿ ಅಡಕವಾದ ವೈವಿಧ್ಯವನ್ನೂ ಸೌಂದರ್ಯದೃಷ್ಟಿಯನ್ನೂ, ಆನಂದಾನುಭೂತಿಯನ್ನೂ ತೋರಿಸುವ ಜೀವಂತ ಸಾಕ್ಷಿಗಳು. ಹೀಗೆ ನಮ್ಮ ಜನರು ಸಮಗ್ರವಾದ ಸರ್ವತೋಮುಖವಾದ ಸಂಪೂರ್ಣವಾದ ಜೀವನವನ್ನು ಬಾಳಿ ಸಾರ್ಥಕತೆಯನ್ನು ಹೊಂದಿದ್ದಾರೆ; ಧನ್ಯತೆಯನ್ನು ಪಡೆದಿದ್ದಾರೆ.

ಈ ಸಂಕಲನದಲ್ಲಿ ಸೇರಿದ ಒಂದು ದುಂದುಮಿಯೂ ಇನ್ನೊಂದು ಲಾವಣಿಯೂ ಬೇರೆ ಬೇರೆ ಕವಿಗಳಿಂದ ರಚಿಸಲ್ಪಟ್ಟಿದ್ದರೂ, ಅವೆರಡರ

ಲ್ಲಿಯ ಕತೆಯಲ್ಲಿ ಏಕಸೂತ್ರತೆ ಇರುವದರಿಂದ ಇವುಗಳನ್ನು ಕೂಡಿಯೆ ಪ್ರಕಟಿಸಲಾಗಿದೆ. ಮೊದಲಿನ ಹಾಡಿನಲ್ಲಿ ಕವಿಯು ಮಲ್ಲಸರ್ಜನ ರಾಜ್ಯ ವೈಭವವನ್ನು ಮೊದಲುಗೊಂಡು ಆಂಗ್ಲರು ವೀರರಾಣಿ ಈರವ್ವನನ್ನು ಕುಸುಗಲ್ಲಿಗೆ ಒಯ್ದ ಪ್ರಸಂಗದವರೆಗಿನ ಎಲ್ಲ ಹೃದಯವೇಧಕವಾದ, ರೋಮಾಂಚಕಾರಿಯಾದ ಸನ್ನಿವೇಷಗಳನ್ನು ಹೃದಯಂಗಮವಾಗಿ ವರ್ಣಿಸಿದ್ದಾನೆ. ಎರಡನೆಯ ಹಾಡಿನಲ್ಲಿ ಮತ್ತೊಬ್ಬ ಕವಿಯು ಈರವ್ವನ ಲಿಂಗೈಕ್ಯದ ದಾರುಣ ಚಿತ್ರವನ್ನು ಮನಂಬುಗುವಂತೆ ನಿರೂಪಿಸಿದ್ದಾನೆ. ಹೀಗೆ ಮೊದಲಿನ ದುಂದುಮಿಗೆ ಎರಡನೆಯ ಲಾವಣಿಯು ಪೂರಕವಾಗಿದೆ. ದೊರೆ ಮಲ್ಲಸರ್ಜನ ದುಂದುಮಿಯನ್ನು ರಚಿಸಿದ ಕವಿಯು ಹೊಂಗಲದ 'ವೃಷಭ' ಇಲ್ಲವೆ ಬಸವನಾಗಿರಬೇಕು. ಏಕೆಂದರೆ ಕೈಬರಹದ ಮೂಲ ಪ್ರತಿಯಲ್ಲಿ ಈ ಹಾಡುಗಳನ್ನು ಬರೆದವನು ಹೀಗೆ ಅಂದಿದ್ದಾನೆ. "ಮೂರು ದುಂದುಮಿಗಳು ಹೋಳಿ ಪದಗಳ ಭರಣಾ ಹಾಕಿ" ಬರೆಯಲ್ಪಟ್ಟಿವೆ. ಇವುಗಳ ಶಕೆ ೧೭೬೨ ಪ್ರಮೊಧೂತ ಸಂವತ್ಸರ ಕಾರ್ತಿಕ ಮಾಸ ಅದೇ ಮೂಲ ಪ್ರತಿಯಲ್ಲಿಯ ಕುಶಲವರ ಲಾವಣಿಯ ಕೊನೆಯಲ್ಲಿ ಹೇಮುಗಲಾಖ್ಯ ವೆಂಬುದೀ ಪುರವ | ಅಲ್ಲಿ | ಸೋಮಧರನ ಸಮಯಪ್ರೇಮಿ ವೃಷಭನೆಂಬ | ನಾಮದ ಸೇವಕ ಪೇಳಿದ ಕೃತಿಯ || ಈ ಪ್ರಕಾರ ಕವಿಯು ತನ್ನ ಬಗ್ಗೆ ಹೇಳಿಕೊಂಡಿದ್ದಾನೆ. ಹಾಗೆಯೇ ಈ ದುಂದುಮಿಯ ಕೊನೆಯ ಪದ್ಯದಲ್ಲಿ ಈರವ್ವನ ಬಾಯಿಂದ ಹೀಗೆ ಕವಿಯು ಉದ್ಗಾರ ತೆಗೆಸಿದ್ದಾನೆ. "ನೆರವಿಕೋ ಹೊಂಗಲದರಸು ವೃಷಭ ರಾಜ | ಸರಿ ನಿನ್ಹೊರತು ಮತ್ತ್ಯಾರ್ಯರಿಯೆ ಲೋಕದಲ್ಲಿ" || ಮತ್ತು ದುಂದುಮಿಯ ಕೊನೆಯ ನುಡಿಯಲ್ಲಿ ಬಾಜೀರಾಯನು ಹೊಂಗಲಕ್ಕೆ ಬಂದಾಗ, ಕವಿಯು ತನ್ನ ಊರಿನ ಸೌಂದರ್ಯವನ್ನು ಮನಸಾರೆ ಹೊಗಳಿ, ತನ್ನ ಊರಿನ ಅಭಿಮಾನವನ್ನು ಸೂರೆ ಮಾಡಿದ್ದಾನೆ. ಆದ್ದರಿಂದ ಈ ಎಲ್ಲ ಬಾಹ್ಯ ಮತ್ತು ಆಂತರಿಕ ಕಾರಣಗಳಿಂದ ಇದನ್ನು ಬರೆದ ಕವಿಯು ಹೊಂಗಲದ ಬಸವನೇ ಇರಬೇಕೆಂದು ಅನಿಸದಿರದು. ಇದನ್ನು ಶ್ರೀ. ಮಧುರ ಚೆನ್ನರು ತಮ್ಮ ಮುನ್ನುಡಿಯಲ್ಲಿ ಊಹಿಸಿದಂತೆ ಕಿತ್ತೂರಿನ ಕ್ರಾಂತಿಯು ನಡೆಯುತ್ತಿದ್ದಾಗಲೆ ಇವನು ಜೀವಿಸಿರಬೇಕೆಂಬ ಅಭಿಪ್ರಾಯವನ್ನು ಒಪ್ಪಬಹುದಾಗಿದೆ.

ಹೇಗೆಂದರೆ ಈತನು ತನ್ನ ಕತೆಯ ಬೆಳವಣಿಗೆಯಲ್ಲಿ ನಡೆದು ಹೋದ ಐತಿಹಾಸಿಕ ಸಂಗತಿಗಳನ್ನು ಅನುಕ್ರಮವಾಗಿ ಚಾಚೂ ತಪ್ಪದೆ ಬಣ್ಣಿಸುತ್ತ ಹೋಗುತ್ತಾನೆ. ನಮಗೆ ದೊರಕುವ ಐತಿಹಾಸಿಕ ಸತ್ಯಕ್ಕೂ ಈತನು ವಿವರಿಸಿದ ಸಂಗತಿಗಳಿಗೂ ಗಾಢವಾದ ಸಂಬಂಧವು ದೊರಕುತ್ತದೆ. ಆದ್ದರಿಂದ ಈತನು ೧೯ನೆಯ ಶತಮಾನದ ಕಾಲುಭಾಗದಲ್ಲಿ ಜೀವಿಸಿದ್ದನೆಂದು ಧೈರ್ಯವಾಗಿ ಹೇಳುತ್ತೇವೆ. ಈತನ ವರ್ಣನೆಗಳಲ್ಲಿಯ ವಾಸ್ತವತೆ ಐತಿಹಾಸಿಕ ಘಟನೆಗಳಲ್ಲಿಯ ಸತ್ಯತೆ ಮತ್ತು ಶೈಲಿಯಲ್ಲಿಯ ಆತ್ಮೀಯತೆ ನಮಗೆ ಬೆರಗನ್ನುಂಟು ಮಾಡುತ್ತದೆ· ಕವಿಯು ಅತಿಶಯೋಕ್ತಿಯನ್ನಾಗಲಿ ಅನುಚಿತವಾದ ವರ್ಣನೆಯನ್ನಾಗಲಿ ಮಾಡಿಲ್ಲ. ತನ್ನ ಕತೆಯ ಬೆಳವಣಿಗೆಯ ಔಚಿತ್ಯವನ್ನುಳಿಸಿಕೊಂಡು ತನ್ನ ಕಲ್ಪನಾಶಕ್ತಿಯನ್ನೂ, ವರ್ಣನಾ ಚಾತುರ್ಯವನ್ನೂ, ಛಂದಸ್ಸಿನ ವೈವಿಧ್ಯವನ್ನೂ ತೋರಿಸಿದ್ದಾನೆ. ಐತಿಹಾಸಿಕ ವಸ್ತುವು ಸುಂದರವಾದ ಕಾವ್ಯವೂ ಹೇಗೆ ಆಗುವದೆಂಬುದಕ್ಕೆ ಇದೊಂದು ಉತ್ತಮ ಉದಾಹರಣೆಯಾಗಿದೆ. ನಮ್ಮಲ್ಲಿ ಇತಿಹಾಸವನ್ನು ಪುರಾಣವನ್ನಾಗಿ ಮಾಡುವ ಸಂಪ್ರದಾಯವಿದೆ. ಆದರೆ ಕವಿಯು ಆ ಸಂಪ್ರದಾಯಕ್ಕೆ ಬಲಿಬೀಳದೆ ಐತಿಹಾಸಿಕ ಘಟನೆಗಳನ್ನು ಸುಂದರವಾಗಿ ಕಾವ್ಯಮಯನಾಗಿ ಹೆಣೆದಿದ್ದಾನೆ. ಈತನ ಸಮಯೋಚಿತವಾದ ವರ್ಣನೆಗಳೂ, ಕತೆಯ ಓಟವೂ, ಎದೆಯನ್ನು ಕೊರೆಯುವ ಶೋಕರಸವೂ, ಸತ್ಯ ಸಂಗತಿಗಳನ್ನೇ ಎತ್ತಿ ತೋರುವ ವಾಸ್ತವ ದೃಷ್ಟಿಯೂ, ಹೃದ್ಯವಾದ ಪ್ರಾಸ-ಅನುಪ್ರಾಸಗಳೂ, ಛಂದಸ್ಸಿನ ಗತಿ-ಗಮಕಗಳೂ, ಓದುಗರನ್ನು ಆನಂದಗೊಳಿಸುತ್ತವೆ. ಇತಿಹಾಸವನ್ನು ಹೇಗೆ ಸಾಹಿತ್ಯಕ್ಕೆ ತಿರುಗಿಸಬೇಕೆಂಬ ಕಲಾಕುಶಲತೆಯನ್ನು ಈತನು ಯಶಸ್ವಿಯಾಗಿ ತೋರಿಸಿದ್ದಾನೆ.

ಇನ್ನು ಎರಡನೆಯ ಪದವನ್ನು ಬರೆದವನು ಹೆಬ್ಬಳ್ಳಿ ಬಸವನ ಕಂದನೆಂದು ಹೇಳಿಕೊಂಡಿದ್ದಾನೆ. ಈತನಿಗೂ ಮೊದಲಿನ ವೃಷಭನಿಗೂ ಹೇಳಿಕೊಳ್ಳುವ ಸಂಬಂಧವಿರಲಾರದೆಂದು ನಮಗೆ ಅನಿಸುತ್ತದೆ. ಏಕೆಂದರೆ ಈತನು ವೀರವ್ವನ ಲಿಂಗೈಕ್ಯವನ್ನು ಪುರಾಣ ರೀತಿಯಲ್ಲಿ ವರ್ಣಿಸಿದ್ದಾನೆ. ಇವನು ಕಿತ್ತೂರಿನ ಇತಿಹಾಸವು ನಡೆದಾಗ ಜೀವಿಸಿದ್ದಂತೆ ತೋರುವದಿಲ್ಲ. ಏಕೆಂದರೆ ಇಲ್ಲಿ ಬರುವ ವರ್ಣನೆಯು ಕಣ್ಣಿನಿಂದ ನೋಡಿದುದಾಗದೆ

ಜನಜನಿತವಾದ ಕತೆಯಾಗಿದೆ. ಇನ್ನು ದೊರೆಸಾನಿ ಈರವ್ವನವರ ಮರಣದ ವಿಷಯವು ಒಂದು ಶೋಚನೀಯವಾದ ಘಟನೆಯಾಗಿದೆ. ಆಂಗ್ಲ ಅಧಿಕಾರಿಗಳ ಕಾಗದ ಪತ್ರಗಳ ಆಧಾರದ ಮೇಲಿಂದ ನೋಡಲಾಗಿ, ದೊರೆಸಾನಿಯವರನ್ನು ಧಾರವಾಡದಿಂದ ಅಹಮ್ಮದನಗರಕ್ಕೆ ಹದ್ದುಪಾರ ಮಾಡುವವರಿದ್ದಾರೆಂಬ ವಾರ್ತೆಯನ್ನು ಕೇಳಿ, ಈರವ್ವನವರೇ ವಜ್ರದುಂಗುರವನ್ನು ಅರೆದು ಕುಡಿದು ಮೃತವಾದರೆಂದು ತಿಳಿದು ಬರುತ್ತದೆ. ಅಲ್ಲದೆ ಆಂಗ್ಲಾಧಿಕಾರಿಗಳೇ ದೊರೆಸಾನಿಯನ್ನು ಉಪಾಯದಿಂದ ವಿಷಹಾಕಿ ಸಾಯಿಸಿದರೆಂದೂ ತಿಳಿದುಬರುವಂತಿದೆ. ಅಂತೂ ವಿಷದಿಂದ ಮರಣವಾದ ಮಾತು ಗ್ಯಾಝೆಟಿಯರವೂ ಒಪ್ಪುತ್ತದೆ. ಈತನು ಕೊಡುವ ಪುರಾಣದ ಹೋಲಿಕೆಗಳೂ, ವಸ್ತು-ವಡವೆಗಳ ಹೆಸರುಗಳೂ ವಾಸ್ತವದಿಂದ ದೂರವಿರುತ್ತವೆ. ಕಿತ್ತೂರಿನ ಪ್ರಕರಣವೆಲ್ಲ ಕೊನೆಗೊಂಡಾಗ ಈತನು ಜನರ ಬಾಯಿಂದ ಕೇಳಿದ ಕಥೆಯನ್ನೇ ಲಾವಣಿಯಲ್ಲಿ ಹೆಣೆದಿದ್ದಾನೆ. ಈತನ ವರ್ಣನೆಗಳಲ್ಲಿ, ಉಪಮೆಗಳಲ್ಲಿ ಕಲಾಚಾತುರ್ಯವಿದೆ. ವೀರವ್ವನಿಗಾದ ಅಪಾರ ದುಃಖವನ್ನೂ, ಅವಳ ಮರಣದಿಂದ ಜನತೆಯಲ್ಲಿ ಉಂಟಾದ ಸಂತಾಪವನ್ನೂ ಹೊರಗೆಡಹಿದ್ದಾನೆ.

ಇಲ್ಲಿ ಸೇರಿಸಿದ ದುಂದುಮಿ-ಲಾವಣಿಗಳ ಹುಟ್ಟು-ಗುಟ್ಟುಗಳನ್ನು ಹೇಳುವದು ಸಾಹಸದ ಮಾತೇ ಸರಿ. ಆದರೂ ದುಂದುಮಿ ಮತ್ತು ಹೋಳಿ ಹಾಡಿಗೆ ಸಂಸ್ಕೃತದಲ್ಲಿಯ ಭವಿಷ್ಯ ಪುರಾಣವೂ, ಹೋಲಿಕಾ ಮಹಾತ್ಮ್ಯವೂ ಆಧಾರವಾಗಿದೆಯೆಂದು ತೋರುತ್ತದೆ. ಈ ಢುಂಢಾ ರಾಕ್ಷಸಿಯಲ್ಲಿ (ಹೋಲಿಕೆಯಲ್ಲಿ) ವೀರರಸವೂ, ಭೀಭತ್ಸರಸವೂ ಮಿಳಿತವಾಗಿದ್ದವು. ಆದ್ದರಿಂದಲೆ ದುಂದುಮಿ ಹೋಳಿ ಪದಗಳಲ್ಲಿ ವೀರ ಮತ್ತು ಬೀಭತ್ಸ ರಸಗಳನ್ನು ನಾವು ಕಾಣುತ್ತೇವೆ.

ಇನ್ನು ದುಂದುಮಿ ಲಾವಣಿಗಳ ಛಂದಸ್ಸಿನ ಬಗ್ಗೆ ಕೆಲವು ಮಾತುಗಳನ್ನು ಬರೆಯುವದು ಅಗತ್ಯವೆಂದು ಅನಿಸುತ್ತದೆ. ದುಂದುಮಿಗಳೆಲ್ಲವೂ ಒಂದೇ ಮಟ್ಟಿನಲ್ಲಿ ರಚಿತವಾಗಿರಲಾರವು. ಇದಕ್ಕೆ ಯಾವದೊಂದು ವಿಶಿಷ್ಟ ಛಂದಸ್ಸೂ ಇರಲಿಕ್ಕಿಲ್ಲ. ಆದರೆ ಲಾವಣಿಗಳು ಹೇಗೋ ಹಾಗೆ ದುಂದುಮಿಗಳು ಅನೇಕ ಬಂಧಗಳಲ್ಲಿ ರಚಿತವಾಗಿವೆ.

ಈ ದುಂದುಮಿಯು ಮುಖ್ಯವಾಗಿ ಲಲಿತಲಯದಲ್ಲಿದೆ. ಇದರಲ್ಲಿನ ಚರಣಗಳು ಮುಖ್ಯವಾಗಿ ನಾಲ್ಕು ನಾಲ್ಕು ವಿಷ್ಣುಗಣಗಳ ಚರಣಗಳು. ಪದ್ಯದ ಮೊದಲನೆಯ ಎರಡು ಚರಣಗಳು ತ್ರಿಪದಿಯ ಬಂಧಕ್ಕೆ ಸಮೀಪ ವಾಗಿವೆ. ಹೋಳಿಯ ಪದದಂತೆ ಇದನ್ನು ಹಾಡಬಹುದು.

ಚೆಂದುಳ್ಳರಸನ ಉದರ | ಕಂದರ ವಲ್ಲಭೆಯರ್ |
ಹೊಂದಿರುವರರ ಮನೆಯೊಳಾಗ ||

ಆನಂತರ ಬರುವ ಪದ್ಯದ ಚರಣಗಳು ನಾಲ್ಕು ನಾಲ್ಕು ವಿಷ್ಣುಗಣ ಗಳಿಂದ ಕೂಡಿವೆ

ಮುಖವು ಚಂದಿರನ ಜುಳಕವು ನೇತ್ರದಲಿ ನಾ |
ಸಿಕವು ಚಂಪಕ ಚೆಲ್ವ | ಶುಕನುಡಿಯು | ಒಪ್ಪಾವ |
ಪಿಕವು ಧ್ವನಿಯು ಗಲ್ಲ ಕನ್ನಡಿಯು ದೇಹ |
ಮುಕವು ಕಸ್ತುರಿ ಗಂಧ ತಳಿರಡಿಯು ||

ಆ ಮೇಲೆ ಮೂರು ಕಿರಿಚರಣಗಳು ಬರುತ್ತವೆ.

ಕೆಂಪಧರೆಯರು |
ಗುಂಪುಗುರುಳೆರು |
ಸಂಪುತರಳೆರು ||

ಆಮೇಲೆ ಮತ್ತೆ ನಾಲ್ಕು ಹಿರಿಚರಣಗಳು, ನಂತರ ತ್ರಿಪದಿಗೆ ಸಮೀಪ ಬರುವ ಎರಡು ಚರಣಗಳು ಕೊನೆಗೊಂದು ಮುಕ್ತಾಯ. ಇದೇ ಕ್ರಮ ಪ್ರತಿ ಪದ್ಯದಲ್ಲಿಯೂ ಕಂಡುಬರುತ್ತದೆ. ಮುಕ್ತಾಯದಲ್ಲಿ ಆದಿ ಮತ್ತು ಅಂತ್ಯಪ್ರಾಸಬದ್ಧವಾದ ಎರಡು ಚರಣುಗಳುಂಟು.

ಕಾಮುರತಿಯರಂತೆ ನಲಿದು | ಇರುತಿಹರ್ |
ರಾಮ ಸೀತೆಯರಂತೆ ಒಲಿದು ||

ಇದೇ ಕ್ರಮ ಕೊನೆಯವರೆಗೂ ಕಂಡು ಬರುತ್ತದೆ. ವೈವಿಧ್ಯದಿಂದ ಸೊಗಸನ್ನು ತರಬೇಕೆಂದು ಕವಿಯು ಹಿರಿ-ಕಿರಿ ಚರಣಗಳನ್ನು ಕೌಶಲ್ಯದಿಂದ

ಹೆಣೆದಿದ್ದಾನೆ. ಹಿರಿಚರಣಗಳು ಆದಿಪ್ರಾಸದಿಂದ ಕೂಡಿವೆ. ಕಿರಿ ಚರಣಗಳು ಆದಿ ಮತ್ತು ಅಂತ್ಯಪ್ರಾಸದಿಂದ ಕೂಡಿವೆ. ಕನ್ನಡಕ್ಕೆ ವಿಶಿಷ್ಟವಾದ ಆದಿಪ್ರಾಸವನ್ನು ಕವಿಯು ದುಂದುಮಿಗಳಲ್ಲಿಯೂ ಉಪಯೋಗಿಸಿದ್ದಾನೆ. ಅಲ್ಲದೆ ಕನ್ನಡಕ್ಕೆ ವಿಶಿಷ್ಟವಾದ ತ್ರಿಮೂರ್ತಿ ಗಣಗಳನ್ನು ಬ್ರಹ್ಮ, ವಿಷ್ಣು, ರುದ್ರಗಣಗಳನ್ನು ಈ ಪದವು ಆಶ್ರಯಿಸಿದೆ.

ಇನ್ನು ಲಾವಣಿಯ ವಿಚಾರ. ಲಾವಣಿಗಳನ್ನು ಹೆಚ್ಚಾಗಿ ಮಂದಾನಿಲಯದಲ್ಲಿ ರಚಿಸಿದ್ದಾರೆ. ಈ ಲಯದಲ್ಲಿ ನಾಲ್ಕು ಮಾತ್ರೆಯ ನಾಲ್ಕು ಗಣಗಳು ಇರಬೇಕು. ಆದರೆ ಜಾನಪದ ಮಂದಾನಿಲದಲ್ಲಿ ನಿರ್ದಿಷ್ಟವಾಗಿ ನಾಲ್ಕು ಮಾತ್ರೆಯ ಗಣಗಳು ಹೊರಡುವದಿಲ್ಲ. ಏಕೆಂದರೆ ಹಾಡುಗಬ್ಬದಲ್ಲಿ ಅಕ್ಷರಗಳನ್ನು ಹಿಗ್ಗಿಸಿ ಅಥವಾ ಕುಗ್ಗಿಸಿ ಹೇಳುವ ಕ್ರಮ ಅದರ ವೈಶಿಷ್ಟ್ಯವಾಗಿದೆ. ಆದುದರಿಂದ ಇಲ್ಲಿಯ ಮಂದಾನಿಲ ಮಾತ್ರಾಗಣಕ್ಕೆ ಸಂಬಂಧಿಸದೆ ಅಂಶಗಣಕ್ಕೆ ಸೇರಿದೆ. ಮಂದಾನಿಲ ಲಯ ಲಾವಣಿಗಳಲ್ಲಿ ಬಳಕೆಯಾಗುವದಕ್ಕೆ ಒಂದು ಮುಖ್ಯವಾದ ಕಾರಣವಿದೆ. ಅದೇನಂದರೆ ಕತೆಯ ಓಟಕ್ಕೆ ಇದು ಬಹಳ ಅನುಕೂಲವಾದುದು. ಅಲ್ಲದೆ ಅದು ಗೇಯುವೂ ಆಗಿರುತ್ತದೆ.

ಕೊನೆಯ ಮಾತು:— ಈ ದುಂದುಮಿಯ ಪ್ರಕಟನೆಯ ಬಗ್ಗೆ ಒಂದು ಮಾತನ್ನು ಹೇಳುವದು ಅನಿವಾರ್ಯವಾಗಿದೆ. ನಮ್ಮ ಮತ್ತು ಕಿತ್ತೂರ ಚೆನ್ನಮ್ಮರಾಣಿ ಇತಿಹಾಸ ಮಂಡಳದ ನಡುವೆ ಆದ ಕರಾರ ಪತ್ರದ ಪ್ರಕಾರ ನಾವು ಸಂಗ್ರಹಿಸಿದ ಎಲ್ಲ ಸಾಹಿತ್ಯವು ಮಂಡಳದ ಪರವಾಗಿ ಮಂಡಳದ ವೆಚ್ಚದಿಂದ ಪುಸ್ತಕರೂಪದಲ್ಲಿ ಪ್ರಕಟವಾಗಬೇಕಾಗಿತ್ತು. ಆದರೆ ಇತ್ತೀಚಿಗೆ ಮಂಡಳದ ಸಂಚಾಲಕರು ಅತಿ ವಿಚಿತ್ರವಾದ ಧೋರಣೆಯನ್ನು ತಾಳಿದ್ದಾರೆ. ಅವರ ರೀತಿ ನೀತಿಗಳನ್ನು ನೆನೆಸಿಕೊಂಡರೆ ಮನಸ್ಸು ದಿಗಿಲುಗೊಳ್ಳುತ್ತದೆ. ಇಷ್ಟೊಂದು ಪರಿಶ್ರಮದಿಂದ ಕಲೆಹಾಕಿದ ನಮ್ಮ ಕಾಗದ ಪತ್ರಗಳನ್ನೆಲ್ಲ ಬದಿಗೊತ್ತಿ, ಮಂಡಳದ ವತಿಯಿಂದ ಅಷ್ಟು ಮಹತ್ವವಲ್ಲದ ಬೇರೆ ಬೇರೆ ಗ್ರಂಥಲೇಖನಗಳನ್ನು ಮುಂದೆ ತರಲು ಹಂಚಿಕೆ ಹಾಕುತ್ತಿದ್ದಾರೆ. ಇಂಥ ಕಾಯಕವು ಸಂಸ್ಥೆಯ ಏಳ್ಗೆಯ

ದೃಷ್ಟಿಯಿಂದ ತುಂಬ ಶೋಚನೀಯವಾಗಿದೆ ಎಂಬುದನ್ನು ಹೇಳಬಯಸು ತ್ತೇವೆ.

ಈ ಸಮಯದಲ್ಲಿ ದೇಶನೂರಿನ ಶ್ರೀ. ಮ. ನಿ. ಪ್ರ. ಸ್ವರೂಪಿಗಳಾದ ಸಿದ್ಧಲಿಂಗ ಮಹಾಸ್ವಾಮಿಗಳು ವಿರಕ್ತಮಠ ಅವರು ಈ ಗ್ರಂಥದ ಪ್ರಕಟ ನೆಯ ಭಾರವನ್ನು ಸಂತೋಷದಿಂದ ಹೊತ್ತುಕೊಂಡರು. ಇವರು ವಿದ್ಯಾಪಕ್ಷ ಪಾತಿಗಳೂ ನಮ್ಮ ನಾಡುನುಡಿಗಳ ಏಳ್ಗೆಗೆ ಅತ್ಯಂತ ಕಳಕಳಿಯಿಂದ ನೆರ ವಾಗುವವರೂ ಆಗಿರುವದು ಅಭಿಮಾನದ ಸಂಗತಿಯು. ದೇಶನೂರ ಮತ್ತು ಸಂಗೊಳ್ಳಿಯ ಮಠಗಳನ್ನು ಸ್ವಪ್ರಯತ್ನದಿಂದ ಸೇವಾಬುದ್ಧಿಯಿಂದ ಉರ್ಜಿತಸ್ಥಿತಿಗೆ ತಂದುದು ಅವರ ಕರ್ತವ್ಯದಕ್ಷತೆಯನ್ನು ನಾಯಕ ನೀತಿ ಯನ್ನು ಸೂಚಿಸುತ್ತವೆ. ಅಲ್ಲದೆ ಅವರು ತಮ್ಮೀ ಉತ್ಪನ್ನದ ಬಹು ಭಾಗ ವನ್ನು ವಿದ್ಯಾರ್ಥಿ ಪ್ರಸಾದ ನಿಲಯಗಳಿಗೂ ಉಳಿದ ಧರ್ಮ ಸಂಸ್ಥೆಗಳಿಗೂ ಧನಧಾನ್ಯಾದಿಗಳಿಂದ ನೆರವಾಗುತ್ತಿರುವದು ಅನ್ಯರಿಗೆ ಮಾರ್ಗದರ್ಶಕವಾಗಿ ರುವದು. ಇಂಥ ಗುರುಮಠದ ನೆರವಿನಿಂದ ಸಾಹಿತ್ಯ ಸಂಸ್ಕೃತಿಯು ವೃದ್ಧಿ ಯಾಗುತ್ತಿರುವದು ಗೌರವಾಸ್ಪದವಾದುದೆಂದು ಹೇಳಬಹುದೆಂದು ಅವರ ಈ ಔದಾರ್ಯ ನೂರು ಮುಖವಾಗಿ ಸಾಗಲೆಂದು ಹಾರೈಸುವೆವು. ಅದರಂತೆ ನಾಗನೂರಿನ ಶ್ರೀ. ಮ. ನಿ. ಪ್ರ. ಸ್ವರೂಪಿಗಳಾದ ಶಿವಬಸವ ಮಹಾ ಸ್ವಾಮಿಗಳು ಕಾಲಕಾಲಕ್ಕೆ ಅನೇಕ ರೀತಿಯಿಂದ ಸಹಾಯ ಸಲಹೆಗಳನ್ನು ಮಾಡಿದ್ದಾರೆ. ಇವರಿಬ್ಬರ ಆಶೀರ್ವಾದದ ಫಲವಾಗಿಯೆ ಇದು ಬೆಳಕಿಗೆ ಬಂದಿದೆ. ಅದ್ದರಿಂದ ಇವರಿಬ್ಬರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಕಡಿಮೆಯೆ. ಈ ವೇಳೆಗೆ ನಮ್ಮ ಹಿತಚಿಂತಕರೂ ಹಿರಿಯರೂ ಆದ ಶ್ರೀ. ಮಧುರಚೆನ್ನರೂ ಮತ್ತು ಶ್ರೀ. ಎಸ್. ಢಿ. ಗಿಡ್ನವರ ಸಾಹೇಬರೂ ಈ ಗ್ರಂಥವು ಇತಿಹಾಸ ಮಂಡಳದ ಪರವಾಗಿ ಪ್ರಕಟವಾಗುವಂತೆ (ಹೆಸರಿ ನಲ್ಲಿ ಮಾತ್ರ) ಅಪ್ಪಣೆ ಕೊಡಿಸಿದರು. ಅವರ ಹಿತವಚನದ ಪ್ರಕಾರ ಇದು ಮಂಡಳದ ವತಿಯಿಂದ ಪ್ರಕಾಶನವಾಗುತ್ತಿದೆ. ಅಷ್ಟೇ ಅಲ್ಲ, ಶ್ರೇಷ್ಠ ಕವಿಗಳೂ ಅನುಭಾವಿಗಳೂ ಆದ ಶ್ರೀ. ಮಧುರಚೆನ್ನರು ಉಚಿತವಾದ ಮುನ್ನುಡಿಯನ್ನು ದಯಪಾಲಿಸಿ, ಈ ಗ್ರಂಥಕ್ಕೆ ಒಂದು ಹೊಸ ಕಳೆಯನ್ನು ತಂದಿದ್ದಾರೆ. ಅದ್ದರಿಂದ ಇವರಿಬ್ಬರಿಗೂ ನಮ್ಮ ಹೃತ್ಪೂರ್ವಕವಾದ

ಕೃತಜ್ಞತೆಯ ವಂದನೆಗಳು. ಸುಂದರವಾದ ಕೈಬರಹದ ಪ್ರತಿಯನ್ನು ಸಿದ್ಧಗೊಳಿಸಿದ ಶ್ರೀ. ವೀರಪ್ಪ ವೀರಭದ್ರಪ್ಪಣ್ಣಾ ನಾಗಶೆಟ್ಟಿ ಅವರಿಗೂ ಅನೇಕ ರೀತಿಯಿಂದ ನೆರವಾದ ಶ್ರೀಗಳಾದ ಕೆ. ಎಸ್. ಪಾಟೀಲ ವಕೀಲರೂ, ಈಶ್ವರ ಸಣಕಲ್ಲ, ಡಿ. ಎಸ್. ಕರ್ಕಿ, ಎಸ್. ಡಿ. ಇಂಚಲ, ಬಿ. ಜಿ. ತುರಮರಿ ಇವರೆಲ್ಲರಿಗೂ ಮತ್ತು ಸಕಾಲಕ್ಕೆ ಸುಂದರವಾಗಿ ಮುದ್ರಿಸಿಕೊಟ್ಟ ವೀರಭಾರತದ ಒಡೆಯರಿಗೂ ನಮ್ಮ ಕೃತಜ್ಞತೆಗಳು.

ಬೈಲಹೊಂಗಲ<br>೧—೫—೧೯೪೯ } **ದೊಡ್ಡಭಾವೆಪ್ಪ ಚನ್ನಬಸಪ್ಪ ಮೂಗಿ.**

---

ಶ್ರೀ. ಮ. ನಿ. ಪ್ರ. ಸ್ವ. ಶಿವಲಿಂಗಮಹಾಸ್ವಾಮಿಗಳವರು, ವಿರಕ್ತಮಠ ದೇಶನೂರ.



॥ ಶ್ರೀಗುರು ಬಸವಲಿಂಗಾಯನಮಃ ॥

# ಕಿತ್ತೂರು ಮಲ್ಲಸರ್ಜನ ದುಂದುಮಿ.

೧

ಗುರುವೆ ನಿಮ್ಮ ಕರುಣದಲಿ । ಸರುವರನು । ಪೊಗಳುವೆನು ।
ವರದಕರ ಪೊರೆವುದೀಗೆನುತೆ ॥ ಹೋಳಿ ಪದ ॥

ಸ್ಮರಿಸುವೆ ಮೂಲೋಕ । ದರಸನಡಿಗಳೆಂಬ ।
ಸರಸೀರುಹದೊಳೆನ್ನ ಶಿರವನು । ಇಟ್ಟು ।
ಪರಶಿವನರಸಿಯ ಸ್ಮರಿಸುವೆನು । ಸುಖ ।
ವೆರಸಿ ತೋರುವ ಗಂಗೆಯ ನಿರಿಸುವೆನು ॥

ಗಣನಾಥನ ।
ಗುಣಯುತನ ।
ಷಣ್ಮುಖದಾತನ ॥ ದಕ್ಷನ ॥

ನೊರಸಿ ಶಿರವನಿತ್ತು ಹರಸಿದನ । ಇವ ।
ನ್ನರಸಿ ಬಲವಗೊಂಡು ಗರಿಸುವೆನು । ಕೃತಿ ।
ಸರಸದಿಂದಲಿ ಮನ । ವೆರಸಿ ಪೇಳುವೆ ಕಿತ್ತೂ ।
ರರಸನ ವರಣ ವಿಸ್ತರಿಸುವೆ ಮುಂದೆ ॥ ದುಂದುಮೆ ॥

ವರದಕರ ಪೊರೆವುದೀಗೆನುತೆ ಮಲ್ಲೇಂದ್ರನರ ।
ಸರಸ ಸಂಪದವನರಿಸುವೆನು ॥ ಹೋಳಿ ॥

ಆಲಿಸುವುದು ಬುಧರೀಗ । ಪೇಳ್ವುದ ।
ಲೀಲೆಯಿಂದಲಿ ಕೇಳಿರೀಗ ॥ವು॥

೨

ಅರಸ ಸತಿಪುತ್ರರನು । ಸರಸ ಸವಿಮಾತಿನಲಿ ।
ಒರೆವೆನೀಗವರ ಪರಿಯನ್ನು ॥

ವಸುಧಿಯೊಳಗೆ ಮಿಗಿ । ಲೆಶವ ಪುರಗಳುಡು ।
ವಿಸರಗಳಿಗೆ ಪೂರ್ಣಶಶಿಯಂದದಿ । ತೋರಿ ।
ಪೆಸರಿಂದೊಪ್ಪುವ ಕಿತ್ತೂರೆಸೆವದಂದಿ । ಭೂಪ ।
ನಸಮನಿರುವ ಸಾಗರದ ಚೆಂದದಿ ॥

ಆ ಮಲ್ಲೇಂದ್ರನು ।
ಭೂದೇವೇಂದ್ರನು ।
ಅತಿ ಸುಂದ್ರನು ॥ ಅರಸ

ರಸಿಯರುಭಯರಾಗ ತೋರುವರು ॥ ರವಿ ।
ಶಶಿರತಿವರರಂತೆ ಯೆನಿಸುವರು । ತ್ರೈಪು ।
ತ್ರಸಮರಿರುವರಿನ್ನೀ । ರಸೆಯೊಳವರ ಸರಿ ।
ವಸುಧಿಪರಾರಿಲ್ಲೆಂ । ದುಸುರುವೆನೀಗ ॥ದುಂಮು ಮೆ॥

ಒರೆವೆನೀಗವರ ಪರಿಯನ್ನು ಲೋಕದೊಳು ।
ಅರಿಯರಾ ರ್ದ್ಧಿಂತಃ ಸಂಪದವ ॥

ಕ್ಷೀರ ಸಾಗರದ ದ್ವಾರಕೆಯ । ಪುರದಂತೆ।
ಮೆರೆವುದೀತ ನೈಶ್ವರಿಯ ॥ ಮುಕ್ತಾಯ ॥

೩

ಪರಿಪರಿಯ ಸಡಗರರ ಮನೆಯೊಳಿರುತಿರೆ ಮುಂದೆ ।
ಸುರಿವ ಮೌಕ್ತಿಕದ ಮಣಿಗಳನು ॥

ತರತರದಲಿ ಅರಮನೆಯೊಳು ಕಾರಂಜಿ ।
ಸುರಿ ಸುರಿವುತೆ ಧ್ವನಿ ಭೇರೀಗಳು । ಗಾಯ ।
ಕರು ಪಾಡುತಿರುವ ತಂಬೂರಿಗಳು । ಚಾರು ।
ತರ ಮಂದಿರದಿ ತೋರ್ಪ ಕಾರ್‍ಯಗಳು ॥

ಚಿತ್ರ ಮಡಿಗಿಯು ।
ಚಿತ್ರ ಗಡಿಗಿಯು ।
ಮತ್ತೆ ಕಿಡಿಕಿಯು ॥ ಎದು

ರಿರುವ ಸುಪತ್ತಿ ಶಯ್ಯಾಲಗಳು । ಸುತ್ತು ।
ಪರಮುತ್ತು ಧರಿಸಿದ ಜಾಲಾರಗಳು । ಒತ್ತಿ ।
ಮಿರುಗುತಿರುವ ತಾರಕಿಗಳಂತೆ ದೀಪಿಕೆ ।
ವುರಿವುರಿವುತಲಾಗಚ್ಚರಿಯುವಾದಂತೆ ॥

ಸುರಿವ ಮೌಕ್ತಿಕದ ಮಣಿಗಳನು ಮಂಚದೊಳು ।
ಬೆರಸಿದವು ಶಶಿಯ ಕಿರಣದಲಿ ॥

ಪರಿಮಳ ಬೀರ್ಪ ಸದ್ಗಂಧ । ಎಸೆವುದು ।
ಜನ ನಾಸಿಕದಿ ಮಕರಂದ ॥

೪

ಚತುರಂಗ ಸೈನ್ಯ ಮಾರ್ಬಲದೊಳರಸನು ಕೂಡಿ ।
ಮಿತಿಯಿಲ್ಲದೊದಗಿ ಬರುತಿರಲು ॥

ದೊರೆಯು ತಯ್ಯಾರಾಗಿ । ಹೊರಡೂ ಸವಾರಿ ಮುಂಪೆ ।
ಬರುತಿಡಬಲ ಪುತ್ರರೊಲಿವುತಲಿ । ನಿಸ್ಸ
ತ್ತರು ಮಂತ್ರಿಗಳು ಸಹವೆರಸುತಲಿ । ಫೌಜು ।
ನೆರೆಯಲಾನೆಯು ಅಶ್ವ ತರಿಸುತಲಿ ॥

ತೇಜು ಗಟ್ಟಿತು ।
ವೌಜು ಹುಟ್ಟಿತು ।
ಭುಜ ತಟ್ಟಿತು ॥ ಸರಿ ॥

ಸರಿಯೆಂದು ಸವಳಗಟ್ಟಿಗಿಯು ಮುಂಪೆ । ಸಾಲು
ವರಿಯುಲು ರಣಬಾಜಿ ಧ್ವನಿಯು ಚಂದ ಸಿಲೇ ।
ದಾರ್‌ಸಿಪಾಯ್‌ಪ್ಯಾದೆ ರಾ । ಹುತ ಚೋಪದಾರರು ।
ಸಾರುವ ಸೈನ್ಯ ಭಟ್ಟಂಗಿಗಳಾಗ ॥ಮುಂದುವೆ॥

ಮಿತಿಯಿಲ್ಲ ದೊಪಗಿ ಬರುತಿರಲು ಛತ್ರಗಳು ।
ಜತಿಗೂಡ್ಯೊದರಿದವು ಕಾಳಿಗಳು ॥

ಹಾರ್ವವು ಮೂರ್ಭಾಲುಪಂಕೇ । ಕುದುರೆಗೆ ।
ಹೇರ್ವರು ವಾದ್ಯದ ಡಂಕೆ ॥

ಶ್ರೀ

ಪಾತ್ರದವರನು ಪದವ । ಸೂತ್ರ ವಿಡಿದ್ಹಾಡುತಲಿ ।
ನೇತ್ರದೊಳು ಭಾವ ತೋರಿಸುತೆ ॥

ಪರುವರಾನೆ ಕುದುರೆಗಳ ತೋಘುಗ ।
ಳ್ಹಾರುವವು ಧಡಧಡಲ್ಲೆನ್ನುತಲಿ । ಆಗ ।
ಬಾರಿನ ಜನರು ಕವಾಯ್ತುದಲಿ । ಇದ್ದು ।
ಸೂರ್ಯಗಡರುವ ಬಾಣ ಬಿಡುವುತಲಿ ॥

ತರಿಕಿಟವೆಂದು ।
ತದ್ಧಿಮಿತವೆಂದು ।
ಜಣಜಣತೆಂದು ॥ ಪಾಡಿ ।

ನಾರಿಜಾಕ್ಷಿಯರು ಒಯ್ಯಾರದಲಿ । ನೃತ್ಯ
ಚಾರುತನದ ನಾಂಟ್ಯವಾಡುತಲಿ । ಹೀಂಗೆ ।
ತೋರಿ ತೆರಳುವ ಸೈನ್ಯ । ಮೀರಿ ಶೋಭಿಸುತೆ ಶೃಂ
ಗಾರವಾಗಲು ನೋಡ್ಯು । ಲ್ಲಾಸದಿ ದೊರೆಯು ॥ ಮಂ ॥

ನೇತ್ರದೋಳು ಭಾವ ತೋರಿಸುತೆ ವೈಭವದ ವಿ ।
ಚಿತ್ರಗಳಿಗೊಲಿದು ನಲಿವುತಲಿ ॥

ಹತ್ತುವರ್ ಪಲ್ಲಕ್ಕಿ ಮುಂದೆ । ತಲಿಮ್ಯಾಲೆ ।
ಸತ್ತ್ರಿಗ್ಗಿಡಿವರು ಚೆಂದದಿಂದೆ ॥

೬

ಅರಸು ಮಕ್ಕಳನಾಗ । ಸರಸ ಸತಿಯರನೀಗ ।
ಹರುಷದಲಿ ಒರೆವೆ ಕೃತಿಯಿಂದೆ ॥ ॥

ಬಿದಿಗಿ ಚಂದಿರನಂತೆ । ಒದಗಿ ಕಳೆಗಳುಕ್ಕಿ ।
ಮದನ ಸುಂದರ ಬಾಪು ಸಾಹೇಬನು । ಇವನಿ ।
ಗಧಿಕನೆನಿಸುವ ಬಾಬಾ ಸಾಹೇಬನು । ಚಿಕ್ಕ ।
ಹೃದಯವುಳ್ಳವ ಬಾಳಾ ಸಾಹೇಬನು ॥

ಬಹು ಚದರರು ।
ಮಾತು ಮಧುರರ ।
ಇವರಿಗಿದಿರಾರು ? ॥ ಚಂದ್ರ ।

ವದನೆ ಮೊದಲ ತಾಯಿ ರುದ್ರವ್ವನು । ತಿಳುವ ।
ಉದರ ಮಾಧುರವಾಣಿ ಚೆನ್ನವ್ವನು । ಇವ ।
ರೊದಗಿ ಪುತ್ರರ ನೋಡಿ । ಸದರಿಗಿವರೆ ಧಣಿ ।
ಅಧಿಕಾರಿಗಳು ಎಂದು । ವದನ ತೂಗುವರು ॥ ದುಂ ॥

ಹರುಷದಲಿ ಒರವೆ ಕೃತಿಯಿಂದೆ ಕೇಳುತಲಿ ।
ಗರಿಸಬೇಕಿದಕೆ ರತಿಯನ್ನು ॥ ॥

ಎಷ್ಟು ವರ್ಣಿಸಲ್ಯಷ್ಟುಭೋಗ ॥ ಮಿತಿಯಿಲ್ಲ
ದಷ್ಟಿರುವದೈಶ್ವರ್ಯವಾಗ ॥

೭

ಚೆಂದುಳ್ಳರಸನ ಉದರ । ಕಂದರರ ವಲ್ಲಭೆಯರ್
ಹೊಂದಿರುವರರಮನೆಯೊಳಾಗ ॥

ಮುಖವು ಚಂದಿರನ ಜು'ಳಕವು ನೇತ್ರದಲಿ ನಾ ।
ಸಿಕವು ಚಂಪಕ ಚೆಲ್ವ । ಶುಕನುಡಿಯು । ಒಪ್ಪೊ ।
ಪಿಕವು ಧ್ವನಿಯು ಗಲ್ಲ ಕನ್ನಡಿಯು । ದೇಹ ।
ಮಿಕವು ಕಸ್ತುರಿ ಗಂಧ ತಳಿರಡಿಯು ॥

ಕೆಂಪಧರಿಯರು ।
ಗುಂಪುಗುರುಳೆರು ।
ಸಂಪು ತರಳೆರು ॥ ತಕ ।

ತಕ ಹೊಳೆಯುವ ಕಂಬುಗೊರಳೆಯರು । ಪಕ ।
ಪಕನೆ ನಗುವ ನಾಭಿಗುರುಳೆಯರು । ಈ ಗ ।
ಮುಕವುಳ್ಳ ಸೊಸ್ತೇರು । ಲಕಲಕಿಸುವ ಮಾ ।
ಣಿಕವೊ ಮಾತುಗಳೆಂಬ । ಸುಖದಿಂದಿರುವರು ॥ ದುಂ ॥

ಹೊಂದಿರುವರರಮನೆಯೊಳಗ ಪಕ್ಷಿಗಳಿಗೆ ।
ಸುಂದರಿಯರಾಗಿ ಒಪ್ಪಿಹರು ॥

ಕಾಮರತಿಯರಂತೆ ನಲಿದು । ಇರುತಿಹರ್ ।
ರಾಮಸೀತೆಯರಂತೆ ಒಲಿದು ॥

೮

ಅರಸಿಯರಾಭರಣಗಳ । ಧರಿಸಿ ಶಶಿ ಕಿರಣವಂತೆ ।
ಕಿರಿನಗೆಯ ತೋರಿ ಹರುಷದಲಿ ॥

ಅರಳು ಮಲ್ಲಿಗಿ ದಂಡಿ । ಸರವು ರ್‍ಯಾಗುಟಿ ಚೌರಿ ।
ಜರದ ಗೊಂಡೆವು ಕ್ಯಾದಿಗೆಯ ಗರಿಯು। ಹೆಳಲೊಳ್ ।
ಕಿರಿಯ ಮುತ್ತಿನ ಜೋಡು ಬೈತಲಿಯು । ಅಲ್ಲಿ ।
ಮೆರೆವ ಪಣಿಯೊಳಾಗ ಕಸ್ತೂರಿಯು ॥

ಕರ್ನ ದೋಲೆಯು ।
ಮೋಹನ್ಮಾಲೆಯು ।
ನತ್ತು ಜೋಲಿಯು ॥ ಇಟ್ಟು ॥

ಸರಿಗಿ ಪುತ್ಥಳಿ ನೆಲ್ಲೀ ಸರ ಪದಕ । ವಜ್ರ
ಬೆರಳೊಳುಂಗುರ ತೆತ್ತಿಸಿರು ವದಕ । ತೋಳೊ
ಳೆರಡು ಒಂಕಿಯು ಬಂಗಾರ್, ಬಳಿ ಬಾಜು ಬಂದು ಲಾಲಿ
ಪುರಿಯು ಸರ್ಪಳಿ ಕಾಲಂದುಗಿ ಝಣರೆನುತ ॥ ಮುಂದುಮೆ ॥

ಕಿರಿನಗೆಯ ತೋರಿ ಹರುಷದಲಿ ಮನ್ಮಥನ ।
ಅರಗಿಳಿಗಳಂತೆ ನುಡಿಯುತಲಿ ॥

ಅತ್ತಿ ಸೊಸಿಗಳಾಗ ಕೂಡಿ । ನಲಿವುತೆ ।
ಅತ್ತಿಗಿಯರು ಲೀಲೆಯನಾಡಿ ॥

೯

ಮಧುರ ಮಾತಿಗೆ ರಾಜ । ರೊದಗಿ ತಮ್ಮ ಸುದತಿಯರ ।
ಪದುಳದಲಿ ಮದನ ಸುಂದರರು ॥

ಮಾಲು ಮಂಟಪವೆಂಬ । ಮೇಲುಪ್ಪರಗಿ ಕೋಣೆ ।
ಮಲಗುವ ಮಂಚದಿ ಹಾಸಿಗೆಯು । ಹಾಸಿ ।
ತಲೆಗಿಂಬು ಗಿರ್ದೆ ಸುಪ್ಪತ್ತಿಗೆಯು । ಜರದ ।
ಶಾಲುಗಳ್ ಹೊದೆವ ಕಲಂದ್ರಿಕಿಯು ॥

ತೈಲ ಗಂಧವು ।
ಪರಿಮಳಂದವು ।
ಮಕರಂದವು ॥ ಸಾಲು ।

ನಿಲುವುಗನ್ನಡಿ ಚಂದ್ರಜೋತಿಗಳು । ಪುಷ್ಪ ।
ಮಾಲ್ಯಷ್ಟಗಂಧದ ಜಾತಿಗಳು । ಈ ಸ ।
ಖೀಲದಿ ರಾಜವಿಲಾಸನಾಳುತೆ ತಮ್ಮ ।
ಲೋಲರೊಡನೆ ರಾಜಾಲಯದೊಳಿರುವರು ॥ಮಂದುಮೆ॥

ಪದುಳದಲಿ ಮದನಸುಂದರರು ಬೆಳೆದರು ಮುಂದೆ ।
ಬಿದಿಗಿ ಶಶಿಯಂತೆ ಯೆಸೆಯುವರು ॥

ಪತಿಗಳಿ ಗೊಲಿದೊಲಿದಿರುವರ್ । ಮನದೊಳು ।
ವ್ರತ ಶೀಲದ ಸತಿಯರ್ ॥

೧೦

ಸೃಷ್ಟಿಪತಿಯರಮನೆಯೊ । ಳ್ಗೊತ್ತು ತಿಳಿಸುವ ಗಡಿಯಾ ।
ಳಿತ್ತ ನೋಡಿದರು ಹೊಳೆಯುವವು ॥

ಎತ್ತ ನೋಡಲು ಚತುರಂಗ ಸೈನ್ಯ ವಾದ್ಯ ।
ಇತ್ತ ನೋಡಲು ದಪ್ತರ್ ಮುನಿಸಿಗಳು । ಮುಸ ।
ಲತ್ತ ಕೊಡುವ ಪುತ್ರಪೌತ್ರಗಳು । ಕಾಗದ ।
ಪತ್ರಗಳ ಬರೆವ ದಿವಾನಗಳು ॥

ಜಮುವರ ಖಾನಿಯು ।
ಹೌದೆದಾನಿಯು ।
ರಾಜಧಾನಿಯು ॥ ಜನ ।

ಸುತ್ತಿರುವ ಚಿತ್ರಕಚೇರಿಗಳು । ಅ ನಿ ।
ಸ್ಪತ್ತರು ನೃತ್ಯದ ತೊತ್ತುಗಳು । ನಿತ್ಯ ।
ಮುತ್ತು ರತ್ನವ ತೆತ್ತಿಸಿರು ಪಲ್ಲಕ್ಕಿಯನೇರ್ರ ।
ಕಿತ್ತೂರರಸನ ಸಂ । ಪತ್ತನೇಂ ಪೇಳ್ವೆ ॥ದುಂದುಮೆ॥

ಎತ್ತ ನೋಡಿದರತ್ತ ಹೊಳೆವವವು ತಳತಳದಿ ।
ಸತ್ಕೀರ್ತಿ ಪ್ರಭೆಯು ಪಸರಿಸುತೆ ॥

ಹಗಲಿರುಳಿರದೆ ತೋರುವದು । ರಂಜನವಾಗಿ ।
ಬಗೆ ಬಗೆಯಿಂದೆ ಬೀರುವದು ॥

೧೧

ಲಿಂಗವಂತನು ದೊರೆಯು । ಅಂಗಜಾರಿಯ ಸರಿಯು ।
ಜಂಗಮರ ಪೊರೆವ ನತನಾಗಿ ॥

(೧೦)

ಪರನಾರಿಯರ ಸಹೋ|ದರನೆಂಬ ಬಿರುದಿರು |
ತಿರಲು ವ್ರತದಿ ಶಿವಪೂಜೆಯಲಿ | ನೇಮ |
ಚರಜಂಗಮರ ಗುರು ಧ್ಯಾನಲಿ | ಇದ್ದ |
ನೆರಸುತಯ್ಗಳ ಶ್ರಾವಣಮಾಸದಲಿ ||

ಭಕ್ತಿ ಗುಣಿಸುತೆ |
ನೀಡಿ ದಣಿಸುತೆ |
ಭಿಕ್ಷ ಯೆಣಿಸುತೆ || ಹೊನ್ನು ||

ಸ್ಮರಹರ ಭಕ್ತ ಮಲ್ಲೇಂದ್ರನಾಗ | ಕರಿ |
ತುರಗ ದಾನವ ಕೊಟ್ಟು ಪಡೆದನಾಗ | ಐದು |
ಶಿರವುಳ್ಳವನ ದಯ | ಗಳಿಸಿಕೊಳ್ಳುತೆ ಪುಣ್ಯ |
ಸರಿಯಿಲ್ಲೀತನ ಕೀರ್ತಿ | ಪರಿಯೆ ಲೋಕದಲಿ || ದಃ ||

ಜಂಗಮರ ಮೊರೆವ ನತನಾಗಿ ಜಗದೊಳಿವ |
ನಿಂಗಿತವನರಿವುದರಿದೆನಿಸಿ ||

ಹಬ್ಬಿತು ದೇಶ ದೇಶದೊಳು | ಮೊರೆಯುಕೀರ್ತಿ
ಶುಭ್ರ ಚಂದ್ರನ ಕಿರಣದೊಲು ||

೧೨

ಮಾನ್ಯ ಮಾನ್ಯರೊಳಿಂಥ | ಚೆನ್ನಿಗರು ಇಲ್ಲಿನುತೆ |
ಪುಣ್ಯನಗರದೊಳು ಕೇಳುತಲಿ || ||

ಅಪ್ಪ ಮಲ್ಲೇಂದ್ರನು | ಒಪ್ಪಿರುವ ಸುದ್ದಿಯು |
ತಪ್ಪದೆ ಶ್ರೀಮಂತಗರುಹಿದರು | ಕೇಳಿ |
ನ್ನಪ್ಪ ರಾಜನೆ ಕಿತ್ತೂರರಸೆಂಬರು | ದೇಶ
ಚಪ್ಪನ್ನದೊಳು ಸರಿಯಿರ್ಪರಾರು ? ||

ಹಂಥ ಧರಿಸಿರೂ ।
ಇಂಥ ದೊರಿ ತೋರು ।
ಪ್ರಾಂತವಲಿ ಜೋರು ॥ ಮಾಡಿ ।

ಕಪ್ಪಗಾಣಿಕಿ ತಾರದಿರ್ಪವನು । ನಿನ್ನ ।
ಉಪ್ಪುಂಡು ಸಪ್ಪಗೆ ಯೆಂಬುವನು । ಇಂಥ ।
ತಪ್ಪಿನಿಂದಿರು ರಾಜ । ಕಪ್ಪುಗೊರಳ ಭಕ್ತ ।
ನಿಪ್ಪನೆನುತೆ ರಾಜ।ಗೊರೆದರ್ಪಿಂಗೆನುತೆ ॥ ದುಂ ॥

ಪುಣ್ಯನಗರದೊಳು ಕೇಳುತಲಿ ಶ್ರೀಮಂತರು ।
ಇನ್ನಿವರ ವಿವರ ತಿಳಿವೆನೆಂದು ॥ ॥

ಕಾಭಾರಿಯವರನ್ನು ಕರಿಸಿ । ಚತುರಂಗ ।
ಮಾರ್ಬಲ ಸುತ್ತಲಿ ನೆರಿಸಿ ॥

೧೩

ಮಾಣಿಕೇಶ್ವರನೆಂಬ । ಜಾಣ ಕಾಭಾರಿ ಬರಲು ।
ಕ್ಷೋಣಿಯೊಳರಸ ಸಂದಿಣಿಸಿ ॥

ಸೊಂಡೂರ ದೇವರ । ಕಂಡುಬರುವೆನೆಂದು ।
ಹಿಂಡುಗಟ್ಟಿಸಿ ಸೈನ್ಯ ತರಿಸುತಲಿ । ರಾಸ್ತೆ ।
ಪುಂಡಮಾಧವರಾಯನ ನೆರಿಸುತಲಿ । ತಂಡ ।
ತಂಡ ರಾವುತಜನ ಕರೆಸುತಲಿ ॥

ಗಟ್ಟಿತು ರೇಜು ।
ಹೊಂಟಿತು ಫೌಜು ॥
ಪುಟ್ಟಿತು ಮೌಜ ॥ ಮಾಡಿ ।

ಪಂಢರ್‌ಪುರದೊಳು ಗಂಡಹೆಂಡರೊಳು । ದಂಡು ।
ಹಿಂಡುಗಟ್ಟಲು ಪುತ್ರ ತಂದೆಗಳು । ಈ ಬ್ರ ।
ಹ್ಮಾಂಡ ತುಂಬಲು ಮದ್ದು । ಗುಂಡು ಪರಾಂಗಳ್ ।
ಝುಂಡೆ ನಿಶಾನಿ, ಮಂಡಲಿ ಚೋಪದಾರರ್ ॥ ದುಂ ॥

ಕ್ಷೋಣಿಯೊಳರಸ ಸಂದಣಿಸಿತು ಚಿಂತಾ
ಮಣಿರಾಯು ಕೂಡೆ ಬರುವುತಲಿ ॥ ॥

ನಾಲ್ಕಾರು ದಿನ ಛಾವಣಿಟ್ಟು । ಉಣಿಸ್ಯಾಣಿ ।
ಸ್ಯಕ್ಕರದಲಿ ಭಿಕ್ಷಾ ಕೊಟ್ಟು ॥

೧೪

ಅಪ್ಪಾಸಾಹೆಬನೆಂಬ । ನಿಪ್ಪಾಣಿ ದೊರಿ ಬರಲು ।
ಒಪ್ಪಿತೊಂದ್ಹತ್ತು ಸಾವಿರವು ॥ ॥

ಅರವತ್ತು ಸಾವಿರ ಸೈನ್ಯದೊಳಗೆ ಸಿಪ್ಪಾ ।
ಣೆರು ತರತರದ ಪೋಷಾಕಿನಲಿ । ಭಯಂ ।
ಕರ ತುರಗದ ತುರುಪಿನ ಸಾಲು । ವ್ಯೆಯೊ ।
ಗ್ಗರಿವ ಮೋಚ್ಛಾರ್ಲಾಗ ಹಾರುತಲಿ ॥

ನಣದಿಗಿಯೊಳು ।
ಎಣಿಸ್ಯ ಣಗಳು ।
ದ್ರವ್ಯ ಖಣಿಗಳು ॥ ಅಲ್ಲಿ ।

ಸೂರಿಗೊಳುತೆ ಘೋಡಗೇರಿಯೊಳು । ಬಂದು ।
ತೆರಳಿದರ್ ಚಂದಿರಕಣಿವಿಯೊಳು । ನೋಡಿ ।
ದಾರಿಗಳ್ಹಿಡಿದು ಭರಲು ಮುಂದೆ ಮುಂಗಲ ।
ಕರವಾಗಿ ತೋರಿತಾ । ಪುರವ ಬಣ್ಣಿಪೆನು ॥ ದುಂ ॥

ಒಪ್ಪಿತೊಂದ್ಹತ್ತು ಸಾವಿರದ ಫೌಜಾಗ ।
ತಪ್ಪದೀ ನಗರದೊಳಗೆನುತ ॥ ॥

ತರತರದಲಿ ಬಂದು ಕೂಡಿ । ಶ್ರೀಮಂತರು ।
ಪರಿ ಪರಿ ದೃಷ್ಟಿಸ್ಯಲ್ಲಾಡಿ ॥

೧೫

ರಾಜ ರಾಜರ ಕೂಡ । ಬಾಜಿರಾಯನು ತನ್ನ ।
ತೇಜದೊಡನಿಳಿದು ಪುರದೊಳಗೆ ॥ ॥

ಮಂಗಲಕರವಾದ । ಹೊಂಗಲ ಪುರದೊಳು ।
ಗಂಗಾಧರನ ಭಕ್ತರಂಗದೊಳು । ಪಣೆ ।
ತುಂಗದೊಳ್ ಭಸಿತ ಸುಸಂಗದೊಳು ಇದ್ದು ।
ಜಂಗಮರೆಡ ಬಲಾನಂದದೊಳು ॥

ಸಾಧು ಸಂಗರು ।
ದುರಿತ ಭಂಗರು ।
ಕರುಣಾ ಪಾಂಗರು ॥ ಅಂತ ।

ರಂಗದೊಳ್ ಶಿವನ ಧ್ಯಾನಂಗಳನು ಇಷ್ಟ ।
ಲಿಂಗ ಪೂಜಿಸುವ ಪುಷ್ಪಂಗಳನು । ತಂದು ।
ಅಂಗಜಾರಿಯ ಕಮಲಾಂಘ್ರಿ ಪರಾಗಕೆ ।
ಭೃಂಗರಾಗಿರುವ ಜನಂಗಳ ನೋಡಿ ॥ದುಂದುಮೆ॥

ತೇಜದೊಡನಿಳಿದು ಪುರದೊಳಗೆ ಶ್ರೀಮಂತರು ।
ಭೂಜಗಳಿರುವ ವನವ ನೋಡುತಲಿ ॥

ತೋಟದಿ ಫಲವು ಪುಷ್ಪಗಳು । ಕಣ್ಣಿಗೆ ।
ನೀಟಾಗೆಸೆದವಾ ಬಾಳೆಗಳು ॥

೧೬

ನೋಡಿದನು ಮಲ್ಲೇಂದ್ರ । ಪಾಡಾಗಿರುವದನ್ನು ।
ಬಿಡಬಾರದಿವನೆನ್ನುತಲಿ ॥

ಒಂದು ದಿವಸ ಅಲ್ಲಿ ವಸ್ತಿತೆಗೆದು ಫೌಜು ।
ಮುಂದೆ ಬಂದಿಳಿದರು ಬೆಟಗೇರಿಯು ಮೇಣೆ ।
ಮಂದಿ ರಥವು ಗಾಡಿ ಪಲ್ಲಕ್ಕಿಯು । ಹಿಂದ
ಮುಂದ ದೊರೆಗಳ್ ಬರುವ ಸಂದಣಿಯು ।

ಶಿಪಾಯ್ಗಳ ಹಿಂಡು ।
ಸವಾರರ ದಂಡು ।
ಈ ಅಬ್ಬರ ಕಂಡು ॥ ಆಕಿ ।

ಸ್ಕಿಂಧದಿ ಬಾಜು ಬಾಂಜೆದರಾಗ ರವಸೆ ।
ಷ್ಟೊಂದು ಕವಾಯ್ತು ಬಂದೂಕವಾಗ । ಬಾಳ !
ದುಂದು ಸರ್ಕಾರ ಕಾಯ್ದೆ ದುಂದುಭಿ ಭೇರಿ ಭೋ ।
ರೆಂದವು ಹುಬ್ಬಳ್ಳಿ । ಮುಂದೆ ಸವಾರಿಯು ॥ದುಂ॥

ಬಿಡಬಾರದಿವನಸನೆಂಬುತಲಿ ನಗರವನು ।
ಸಡಗರದಿ ನೋಡಿ ನಡೆಯುತಲಿ ॥

ಶ್ರಿಂಗರಿಸಿದರಾ ಪುರವನು । ಜರತರ
ಬಂಗಾರದಿಂದೆ ಸರ್ವರನು ॥

೧೭

ಭೂಪ್ರಪುರವನಾ ಧರಣಿಯೋಽಪನೋೞಡಲು ನೇತ್ರ ।
ತಾಪವನು ಕಳೆದರರಸುಗಳು॥

ಹೊಂದಿತೋರುವ ರಾಯರಂದ ಹುಬ್ಬಳ್ಳ್ಯಮ।
ರೇಂದ್ರಪುರದ ಪರಿ ತೋರುವದು । ಬಾಜಾ ।
ರಿಂದು ಕುಂದಣ ರತ್ನ ಹೇಮವದು । ಸವಿ ।
ವಂಪದಂಜೂರ್ ದ್ರಾಕ್ಷಿ ಮಾರುವದು ॥

ಗಂದ್‌ಭರರಿಂದ ।
ಮಲ್ಲಿಗಿಗಳಿಂದ ।
ಪುಷ್ಪಾವಳಿ ಚೆಂದ ॥ ಸಾಲು ।

ಹೊಂದಿಲಿರುವ ಜವಳಿ ಮಳಿಗೆಗಳು । ಕೆಂಪಿ ।
ನಂಪ ಜರದ ಕಿನಕಾಪುಗಳು । ಪೂರ್ಣ ।
ಚಂದಿರ ಕಿರಣ ಪಿತಾಂಬರ್ಗ್ಳುಮರು ಶಾಲು ।
ಚೆಂದದಂಗಡಿಗಳಾನಂದ ತೋರುವವು ॥ ದುಂ॥

ತಾಪವನು ಕಳೆದರರಸುಗಳು ಶ್ರೀಮಂತರ ।
ಭೂಪಸಿದಿರಿನೊಳಾಗೆಸೆಯುುವರು ॥ ॥

ದೈವದವರ ಸೆಟ್ಟರ್ಶಿಂಡು । ಕರಸಿ ತಾ ।
ನಿವಳ್ವಸ್ತ್ರ ಕೊಡಿಸಿದ ದಿಂಡು ॥

೧೮

ಉಡುಗರೆಗಳನು ಮಾಡಿ । ಸಡಗರದಿ ಪೊರಮಟ್ಟು ।
ಆಡರಿದನು ಮುುಂದೆ ಪರ್ವತವ ॥ ॥

ಪಥವ ಪಿಡಿದು ಶೋಭಿತವಾಗಿ ನಡೆದು ದಾ ।
ಲತದಿ ಪೋಗ್ಯಂಬಿಕಾ ಸುತನನ್ನು । ನೋಡಿ ।
ಸ್ತುತಿಸಿ ನಮಿಸಿ ಪಾಡಿ ಸುತರನ್ನು । ಜೋಡಿ ।
ರತುನ ಕೇವಣಿಸಿದ ಕಲಶವನ್ನು ॥

ಭರಣಗಳಿಂದೆ ।
ತೋರಣಗಳಿಂದೆ ।
ಕಾರಣಗಳಿಂದೆ ॥ ಸುಶೋ ।

ಭಿತಮಾಡಿ ಘೃತಪಾಲಮೃತಗಳಿಂದೆ ॥ ಆನ ।
ಬತು ಕಲ್ಲುಸರ್ಕರುನ್ನತಗಳಿಂದೆ । ನೀಡಿ ।
ಮಿತಿಯಿಲ್ಲದೆ ಬ್ರಾಹ್ಮರ ವ್ರತದಿ ವುಣಸಿ ಗೌರೀ ।
ಸುತನ ವರವನು ಪಡೆದತಿಶಯದಿಂದೆ ॥ದುಂ॥

ಅಡರಿದನು ಮುಂದೆ ಪರ್ವತವ ನಿಳಿಯುತಲಿ ।
ಒಡೆಯ ನೀ ಪಾಲಿಸೆಂದೆನುತೆ ॥ ॥

ಚಂದ್ರಸಾಲಿಯ ಗೋಪುರಗಳ । ನುಳಿದು ತಾ ।
ಬಂದು ನೋಡಿದನಾ ಪುರಗಳ ॥

## ೧೯

ಕಂಪಲಿಯು ಕನಕೇರಿ ಹಂಪಸಾಗರ ದಾಂಟಿ ।
ಶಂಪಿಲಿರು ಬೂದಿಹಾಳ ಕಂಡು ॥ ॥

ಪುರದಾಚಾರಿಯ ಕಾಣುತೆರಗಿ ತೆರಳಿ ಮುಂದೆ ।
ಗುರಲಹೊಸೂರ ಹೊಕ್ಕು ಶರಣುಮಾಡಿ । ದೀಕ್ಷಿ ।
ತರ ಅಡಿದಾವರೆಗಳನು ಪಾಡಿ । ಉಡು ।
ಗರೆ ವಸ್ತ್ರಾಭರಣಗಳನು ನೀಡಿ ॥

ವಾದ್ಯಬ್ಬರಗಳು ।
ಕರಿತುರಗಗಳು
ಭೇರಿಭೂರಗಗಳು ॥ ಹಿಂದೆ ।

ಹೊರಡು ಸವಾರಿಯೊಳ್ ರಾಹುತರು । ಲಕ್ಷ ।
ಬಾರಿಸ ತುರಪು ತಾರಿಪದಾರರು । ಧ್ವನಿ ।
ಚೀರು ಕಾಳಿಯು ಕರ್ನಿ, ನೌಬಾಜಿಗಳು ಭಟ್ಟಿಂ ।
ಗಿರವೊದರಿದವು ಶ್ರೀಮಂತರ ಮುಂದೆ ॥ದುಂ॥

ತಂಪಿಲಿರು ಬೂದಿಹಾಳ ಕಂಡು ನಡದೀತು ।
ಗುಂಪು ಪಟವರ್ಧನೆಡಬಲದಿ ॥ ॥

ಸುದ್ದಿ ತಿಳಿದನಾಗ ದೊರೆಯು ಮಲ್ಲೇಂದ್ರ
ಎದ್ದು ಬರುವದೆಂದು ಪ್ರಜೆಯು ॥

೨೦

ಕಿತ್ತೂರ ಪುರದೊಳಗೆ ಹತ್ತಿತು ಸುದ್ದಿಯು ।
ಇತ್ತ ಶ್ರೀಮಂತ ಬರುವುದನು ॥ ॥

ಅತ್ತ ಸೀಲಪ್ಪನ ಕರೆದು ಪೇಳಿ ರಾಜ ।
ಪುತ್ರರ ಜೋಕೆಂದು ಧೈರ್ಯವನು । ಧಾಳಿ ।
ಬಂತು ಶ್ರೀಮಂತರು ಕೋಪವನು । ತಾಳಿ ।
ರುತ್ತಲವರ ಕೂಡ ಪೋಗುವೆನು ॥

ಸತಿಸುತರನ್ನು ।
ಅತಿಜತನಿನ್ನು ।
ಮತಿಯುತವನ್ನು ॥ ಪೇಳಿ ।

ತೃಪ್ತಿ ಬಡುತೆ ಚಿತ್ರಮಾಲಿನೊಳು । ಕೂಡಿ ।
ಹೊತ್ತುಗಳೆವುದೀ ಸಂಪತ್ತಿನೊಳು । ನೀನೇ ।
ಕರ್ತೃತ್ವವನು ತಾಳಿ, ಪುತ್ಥಳಿ ಬೊಂಬಿ ಪು ।
ಪುತ್ರರ ಪತ್ನಿಯರ । ಸಲಹೆಂದು ಪೇಳಿ ॥ದುಂ॥

ಇತ್ತ ಶ್ರೀಮಂತ ಬರುವುದನು ತಿಳಿದವರ ।
ಜತ್ತಿಲ್ಹೋಗುವೆನು ದಯವಿರಲಿ ॥ ॥

ಆರ್ತಿಲಿ ಸೊಸ್ತೇರ ಹಿಂಡು । ಸುಖವಾಳಿ ।
ರುತ್ತಿರುವುದು ಕೂಡಿಕೊಂಡು ॥ ॥

೨೧

ಸದರಿನೊಳಗೆ ಬಂದು । ಮಧುರಮಾತುಗಳಿಂದೆ ।
ವದನ ನೋಡುತಲಿ ಮಗನಿಗೆ ॥ ॥

ಪುತ್ರ ನಿನ್ನಯ ಮುಖ । ಬತ್ತಿ ಬಾಡುತೆ ಕಳೆ ।
ವೆತ್ತು ತೋರದೆ ನಿನ್ನ ಚಿತ್ತದಲಿ । ಮರು ।
ಗುತ್ತಿರ ಬ್ಯಾಡೀ ಸಂಪತ್ತಿನಲಿ । ನಿನ್ನ ।
ಹೆತ್ತವಳನು ಕೂಡಿ ಆರ್ತಿಯಲಿ ॥

ರಾಜ್ಯವಾಳಿರು ।
ವ್ಯಾಜ್ಯವುಳಿದಿರು ।
ಮರ್ಜಿತಳೆದಿರು ॥ ಯೆಂದು ।

ಸತ್ತಿಗ್ಗವುದೆ ಆನಿ ಕುದುರೆಗಳು ಹೊಳೆ ।
ಯುತ್ತಿರುವ ರತ್ನಗಳು ಮುತ್ತುಗಳು । ದವ ।
ಲತ್ತು ಜಾಗ್ರದೆ ಸಲ । ಹುತ್ತಿರು ಪರಿವಾರ ।
ಚಿತ್ತಗಲದೆ ಪುತ್ರ ।ಪೃಥ್ವೀ ಪನೆನಿಸಿ ॥ ದುಂ ॥

ವದನ ನೋಡುತಲಿ ಮಗನಿಗೆ ಬುದ್ಧಿಯನು ।
ಉದಿಸಿದನು ಮಂತ್ರಿಗಳನೊಡನೆ ॥

ತುಂಬಿದೋಲಗವನ್ನು ಮಾಡಿ । ಚಂದ್ರನ ।
ಬಿಂಬದ ಪರಿಯಂತೆ ಕೂಡಿ ॥

೨೨

ಬಾಪು ಸಾಹೆಬಗ್ಹೋಳಿ । ತಾ ಪೊರಡ್ವ ಸಮಯದಲಿ ।
ಅಪರಮಿತವಾದ ದುಃಖದಲಿ ॥ ॥

ಚಿಕ್ಕಮಕ್ಕಳು ನೀವು । ಸಕ್ಕರಿ ಕೆನೆಹಾಲು ।
ಮಿಕ್ಕು ದೆಲ್ಲವ ರುಚಿ ಸೇವಿಸುತೆ । ಕೂಡಿ ।
ಸೌಖ್ಯದಿ ಸರ್ವರು ಮಾತಾಡುತೆ । ಕಳೆ ।
ವ್ಯಕ್ತಿ ತೋರುವ ಸತಿಯರ ನೋಡುತೆ ॥

ಹೊರಳಿ ಬೀಳ್ವಳು ।
ನೆರಳಿ ಏಳ್ವಳು ।
ಮರಳಿತಾಳ್ವಳು ॥ ಚಿಂತಿ ।

ಲಕ್ಷಣವನು ನೋಡಿ ತೆಕ್ಕೆಯೊಳು ಅಪ್ಪಿ ।
ತಕ್ತ ಸಿಂಹಾಸನ ಮಕ್ಕಳೊಳು । ಪ್ರೀತಿ ।
ದಕ್ಕಿಸಿರು ನೀನೀ ಕಾಲಕ್ಕೆಯೆನಗೆ ಮುಂದೆ ।
ದಿಕ್ಕಿಲ್ಲದ್ಹೋಗುವೆ । ಮಕ್ಕಳನಗಲಿ ॥ದುಂ॥

ಅಪರಿಮಿತವಾದ ದುಃಖದಲಿ ಮಲ್ಲೇಂದ್ರ ।
ಭೂಪತಿಯ ನೋಡಿ ಬಳಲಿದಳು ॥

ಪಗಲಿರುಳ್ಗಳೆಯದೆ ಗಂಡ । ನಿನ್ನನು ।
ಅಗಲಿರುವಳೆ ನಾನು ಪುಂಡ ॥

೨೩

ರಾಜಲಕ್ಷ್ಮಿಯನಾಳಿ । ವೋಜಲಿರುವದು ನೀನು ।
ಬಾಜಿರಾಯನ ಒಡಗೂಡಿ ॥ ॥

ಮಡದಿಯ ಕರೆದು ತಾ । ಬಿಡದೆ ಪೇಳಿದ ಬುದ್ಧಿ ।
ನಡೆವು ದತ್ತೆಯ ಮಾತು ನಡಿಸುತಲಿ । ತಾಯಿ ।
ಯೊಡನಾಡಿರುವುದೆಂದು । ಪೇಳುತಲಿ । ಆಗ ।
ನಡುವಿನ ಮಗನ ಹೊರಡಿಸುತಲಿ ॥

ನಿಪ್ಪತ್ತರನ್ನು
ಕಲ್ಲೂರವನ್ನು ।
ದಿವಾನರನ್ನು ॥ ಇಟ್ಟು ।

ಗಡಕಿಲ್ಲೆದೊಳು ಗುರುಪುತ್ರ ವೀರಪ್ಪಗ । ಪೇಳಿ ।
ಬಿಡದೆ ಬರಿವುದರ ಮನೆಯೊಳಗ । ಸುದ್ದಿ ।
ಎಡಬಲಿರುವ ಪರಬಲ ಬರಲವರನ್ನು ।
ಕೆಡವಿಳೆಯೊಳು ನೀ । ಸಡಗರಲೆನುತ ॥ದುಂ॥

ಬಾಜಿರಾಯನ ಒಡಗೂಡಿ ಪೋಗುವೆನು ।
ಭುಜಬಲಿರು ಬಾಪುಸಾಹೇಬನು ॥ ॥

ಮಂತ್ರಿ ಸುತರುಗಳಿಗ್ಹೇಳಿ । ಮಲ್ಲೇಂದ್ರನ
ಕಾಂತೆ ಹೊರಳಿದಳು ಕೇಳಿ ॥

### ೨೪

ಎತ್ತ ನೋಡಲು ಫೌಜು । ಮುತ್ತಿತು ಎಡಬಲದಿ ।
ಪುತ್ರರಳಲಿದರು ಜತ್ತಿನಲಿ ॥ ॥

ತಂದೀ ಮೋರೆಯು ನಾವಿನ್ನೆಂದು ಕಾಣುವೆವೆಂದು ।
ಬಂಧು ಬಳಗ ಕೂಡಿ ನೆರೆವುತಲಿ । ಆ ಮ
ಲ್ಲೇಂದ್ರ ಕರೆದ ಮಗನೆಂಬುತಲಿ । ಕೇಳಿ
ರೆಂದು ಹಿರಿಯಳ ಮಾತು ಮೀರದಲೆ ॥

ಕಳೆ ಚಂದಿರ ।
ಎಳೆ ಕಂದರ ।
ರಾಜಮಂದಿರ ॥ ಸಲ

ಹೆಂದು ಗಲ್ಲವ ಪಿಡಿವುತೆ ಮಲ್ಲೇಂದ್ರ । ಪೇಳಿ ।
ಅಂದಳಾನೆಯು ನೇರಿದ ಮರೇಂದ್ರ ಕಾಳಿ ।
ದುಂದುಭಿ ಭೇರಿ ಭೋರೆಂದುದು ಬಾಜು ಬಾ ।
ಜೆಂದು ಹೊರಟಿತು ಕಿಷ್ಕಿಂಧದಿ ಜನರು ॥ದುಂ॥

ಪುತ್ರರಳಲಿದರು ಜತ್ತಿನಲಿ ಹೊಂಗಲದಿ ।
ಬಂತು ಮಾರ್ಬಲವನೊಡ ಗೂಡಿ ॥ ॥

ಸುತ್ತಿಗಿ ನೆರಳು ಛತ್ರಗಳು । ಪಿಡಿಯುಲು ।
ಕತ್ತಲಾದಿತು ಸಂಪತ್ತಿನೊಳು ॥

### ೨೫

ಹರಿಭಕ್ತ ಬಾಜಿರಾಯನು । ಹೋಗಿ ಇಳಿದಾನು ।
ಮಾರಿಹಾಳ ದಾಂಟ ನೇಮಿಸಿದ ॥ ॥

ಹರನ ಸ್ಮರಿಸಿ ಸಾಗಿ । ದೊರಿ ಮಲ್ಲಸರ್ಜನು ।
ಪರಿಗಟ್ಟಿದುರನಾಗಿ ನಿಂತಿರಲು । ನೋಡಿ ।
ದರಜಿಲ್ಲದಿರದೆ ತಾ ಪೋಗುತಲಿ । ಮುಂದೆ ।
ಪುರ ಬೆಳಗಾಂವಿಯು ದಾಂಟುತಲಿ ॥

ಪುಣೆ ಪಥವಾಗ ।
ಹಿಡಿವುತಲಾಗ ।
ಈ ದವಲತ ಬ್ಯಾಗ ॥ ಎಡ ।

ಪೂರ್ ನದಿ ಸ್ಥಲದಿ ಶ್ರೀಮಂತರೊಳು । ಕಿತ್ತೂ ।
ರರಸು ಸೇಗುಣಿಸಿ ಅಲ್ಲಗೌಡನೊಳು । ಕೂಡಿ ।
ತೆರಳಿದರ್ ಮಿರ್ಜಿ ಸಾಗಂಲಿ ತಾಸಗಾಂವಿಯು ।
ಪುರವನುಳಿದು ಶ್ರೀಮಂತರನೊಡಗೂಡಿ ॥ದುಂ॥

ಮಾರಿಹಾಳ ಸ್ಥಳದಿ ನೇಮಿಸಿದ ಶ್ರೀಮಂತರಿ ।
ಗೇರಿಸಿಡಿಸಿದನು ವಸ್ತ್ರಾಭರಣಗಳ ॥

ಮುತ್ತು ರತ್ನದ ಮಾಲಿಕೊಟ್ಟು । ನಜರಾಣಿ ।
ಹತ್ತು ಸಾವಿರ ದ್ರವ್ಯವಿಟ್ಟು ॥

೨೬

ಗೌಡ ಹೇಳಿದ ಕಿತ್ತೂರ್ ನಾಡರಸಿವನ ಸರಿಯು ।
ಜೋಡಿಲ್ಲ ದೊರೆಗಳೊಳಗೆಲ್ಲ ॥ ॥

ಹಿರಿಯ ಬಾಜೀರಾಯನೊರೆದ ಗೌಡನ ಕೂಡೆ ।
ದರಕಾರಿಲ್ಲದೆ ರಾಜ್ಯವಾಳುವನು । ನಮ್ಮ ।
ಸರಕಾರೆಂದರೆ ಮಾರ್ಮಲೆಯುವನು । ಜುಮೇ ।
ದಾರನಾಗಿ ಹಣಗಳ ಗಳಿಸುವನು ॥

ಉಳಿಸಿದ ಬಾಕಿ ।
ಬಳಸಿಲ್ಲ ಪಾಕಿ ।
ಕಳಿಸಿದ ನೂಕಿ ॥ ಯೆಂದು ।

ಆರು ಲಕ್ಷ್ಯಾಣಗಳ ಹೊರಸಿ । ಕಿತ್ತೂ ।
ರರಸು ಜಾಮಿನ ಪತ್ರಗಳ । ಬರಿಸಿ । ನಡು ।
ವಿರಿಸಿದಲ್ಲನ ಗೌಡನ್ನೂರ ಮಲ್ಲ ಸರ್ಜನ ।
ವರ ಪುತ್ರನ ನೊಡೀ ಕರೆದು ಮನ್ನಿಸಿದ ॥ದುಂ॥

ಜೋಡಿಲ್ಲ ದೊರೆಗಳೊಳಗೆಲ್ಲ ಶ್ರೀಮಂತರು ।
ಬಿಡದೆ ಕರವಿಡಿದು ಹರ ಸುತಲಿ ॥ ॥

ಬಾಜಿರಾಯವನಿಗೆ ಮೆಚ್ಚಿ । ಉಡುಗರಿ ।
ಭೂಜದಿಂದ್ಭೊದಿಸಿದ ಬಿಚ್ಚಿ ॥ ॥

೨೭

ಮಲ್ಲೇಂದ್ರನ ಮಗನಿಗೆ । ಜಲ್ಲಿ ಕುದುರೆಗಳ್ಳಿಡಿಸಿ ।
ಪಲ್ಲಕ್ಕಿಯನೇರಿಸುತಲಾಗ ॥ ॥

ಮುತ್ತಿನ ಮಾಲೆಯ । ಧರಿಸಿ ಮಸ್ತಕದೊಳು ।
ಎತ್ತಿರುವ ಸತ್ತಿಗಿ ಛತ್ರಗಳು । ಹಿಡಿ ।
ಸುತ್ತಲಾಡುವ ಮುಂದೆ ಪಾತ್ರಗಳೂ । ಒದ ।
ರುತ್ತಿರುವ ಕಾಳಿ ವಿಚಿತ್ರಗಳು ॥

ಕೊಟ್ಟು ಚೆಲುವಿಂದ ।
ಹೊಂಟು ನಲುವಿಂದ ।
ಬಿಟ್ಟು ಸ್ಥಳದಿಂದ ॥ ಅಪ್ಪ ॥

ಣಿತ್ತು ಮಗನೆ ಹೋಗೆಂದ್ಲೇಳುತಲಿ । ತಂದಿ ।
ಜತ್ತಿಲ್ಹೋಗುವುದೆಂದು ಪೇಳುತಲಿ । ಜಾಮಿೂ ।
ನಿತ್ತು ಪೋಗ್ವರೆಯೆಂದು ಅತ್ತ ಬಿಡದೆ ಗೌಡ ।
ನಿತ್ತ ಬಾರೆನುತೆ ತನ್ನೊತ್ತಿಲಿರಿಸುತೆ ॥ ದುಂದುಮೆ ॥

ಪಲ್ಲಕ್ಕಿಯೇರಿಸುತಲಾಗ ಕಳುಹಿದನು ।
ನಿಲ್ಲದೇ ದೊರೆಯು ಮಗನನ್ನು ॥ ॥

ಕಿತ್ತೂರ ದಾರಿಯು ಹಿಡಿದು । ಬಾಬಾಸಾಹೆಬ
ಒತ್ತರ ಬಂದವರೊಡಿದು ॥

೨೮

ಜಾಮಿೂನಗಳ ಕೊಟ್ಟು । ಶ್ರೀಮಂತರೊಡಗೂಡಿ ।
ಆ ಮಲ್ಲಸರ್ಜ ಪೋಗುತಲಿ ॥ ॥

ಅರವತ್ತು ಸಾವಿರದಳ ಪಟವರ್ಧನರ್ ।
ನೆರೆದು ಶ್ರೀಮಂತ ಸವಾರಿ ಕೂಡಿ । ಪುಣೇ ।
ಪುರವ ಪೊಗಲು ರಥ ತುರಗ ಗಾಡಿ । ಪೊಕ್ಕು ।
ಅರಮನೆಯೊಳು ವಿಸ್ತಾರಗಳ ನೋಡಿ ॥

ರಾಜರಾಜರು ।
ಮಹಾ ತೇಜರು ।
ರಾಜ ಭೂಜರು ॥ ಪುಣೇ ॥

ದೂರ ಸುತ್ತ್ಬರದಾರಿಳಿಯಲು ದಂಡು । ಕುದುರಿ ।
ಸಾರ್ವಾಟ ನೊಕನುಗ್ಮಂದಿ ಕಂಡು । ಶ್ರೀಮಂ ।
ತರು ಸರದೇಸಾಯಿ ದೇಶ್ಪಾಂಡೆರವರಿಗೆ ।
ತೋರಿಸಿದರು ಹಣಗಳ ಬೇರಿಜ ಲೆಕ್ಕಮಾಡಿ ॥ ದುಂದುಮೆ ॥

ಆ ಮಲ್ಲಸರ್ಜ ಪೋಗುತಲೆವನ ಪಿಡಿದು ।
ನೇಮಿಸಿದ ಪಾರೆ ಚಾಕಿಯುನು ॥ ॥

ಎಡಬಲ ಕುದುರೆಗಳ ಪಾರ್ಶ್ವ । ಮಲ್ಲೇಂದ್ರ ।
ನಡುಗಿ ಬಿಟ್ಟನು ತನ್ನ ಧೈರ್ಯ ॥ ॥

೨೯

ಕಿತ್ತೂರಪುರದೊಳಗೆ । ಅತ್ತಿ ನೀಲವ್ವನು ।
ಇತ್ತುಸುರುಗಳೆದು ಅಳಲುವಳು ॥

ಮಡಿದ ಚೆನ್ನವ್ವನು । ಒಡೆಯ ಹೋದನು ಎಂದು ।
ಸಡಗರ ಸಂಪತ್ತು ಸುಡುಬದಕಾ । ಅವ ।
ರೊಡನೆ ಪೋಗದೆ ಜೀವಿಸುವುದೇತಕಾ । ತಲಿ ।
ಪೊಡೆಯಲಜನು ಬರೆದ್ದಿಂತಾದಕಾ ॥

ಮುತ್ತು ಮಾಣಿಕ ।
ರತ್ನವರ ಪದಕ ।
ನತ್ತು ನಾಪಿಕ ॥ ತೆಗೆ ।

ದಿಡುತೆ ಕಾಂತನು ಇದ್ದೆಡೆಗೆ ಪೋಗಲ್ಯೋ । ಅಲ್ಲಿ ।
ತಡೆದನ್ಯಾತಕೆ ಪ್ರಾಣವ ಬಿಡಲ್ಯೋ । ಯಾರ ।
ಗೊಡಿವೇನು ಮಗನೇ ನೀ । ನಡೆಯೆಂದು ಗಲ್ಲವ ।
ಪಿಡಿದು ಪೇಳುತೆ । ಗಡಬಡಿಸಿದಳಾಗ ॥ ದುಂದುಮೆ ॥

ಇತ್ತುಸುರುಗಳೆದು ಅಳಲುವಳು ಅರಮನೆಯೊಳ್ ।
ಪುತ್ರರ್ಶ್ಲೋರಳಿದರು ದುಃಖದಲಿ ॥

ಯತ್ನಮಾಡುವದೇನು ಮುಂದು । ಮಲ್ಲೇಂದ್ರ ।
ಇತ್ತ ಮೋರೆಯ ತೋರುವನೆಂದು ? ॥

೩೦

ಗಂಡು ಮಾಲಿಯ ಹುಣ್ಣು । ಹುಟ್ಟಿತು ಗೌಡಗ ।
ಕಂಡೇನಿನ್ನಾ ಲಿಂಗ ಪುರವನ್ನು ॥

ಇಲ್ಲಿರುವ ಸೇಗುಣಿಸಿ । ಅಲ್ಲಗೌಡನು ಡೋಲಿ ।
ಯಲ್ಲಿ ಕುಳಿತುಕೊಂಡು ನಿಲ್ಲವಲಿ । ಮಂದಿರ
ದಲ್ಲಿ ಬರಲು ನೋಡಿ ಶೋಕದಲಿ । ಮಕ್ಕ
ಳೊಲ್ಲಭೆಯರು ಬಂದು ಕೂಡುತಲಿ ॥

ಗಂಡಮಾಲೆಯು ।
ತಂಡ ಶೂಲಿಯು ।
ಕೆಂಡ ಜ್ವಾಲಿಯು ॥ ಯೆಂತೆ ।

ಗಲ್ಲದೊಳೊಡೆದು ರಕ್ತ ಹರಿಯಲಾಗ । ಪ್ರಾಣ ।
ನಿಲ್ಲದ್ಹೋಗಲು ಜೀವ ಸರಿಯಲಾಗ । ಮನೆ ।
ಯಲ್ಲಿ ಜನರು ದುಃಖ, ದಲ್ಲಿರಲಿತ್ತಲು ।
ಮಲ್ಲೇಂದ್ರ ಧರ್ಮವ । ಸಲ್ಲಿಸಿದಾಗ ॥ ದುಂದುಮೆ ॥

ಕಂಡೇನಿನ್ಹ್ಯಾಂಗ ಪುರವನ್ನು ಎನ್ನುತಲಿ ।
ಪುಂಡಗೌಡಾಗ ಸಾಗಿದನು ॥

ಆಕ್ಷಣ ಪುರದಿ ಕಾರ್ಕೂನರು ।ಹಣಗಳನು ।
ಲಕ್ಷಾವಧಿಯ ಸೂರ್‍ಯಾಡಿದರು ॥ ॥

೩೧

ರಾಜ ರಾಜರ ಕೂಡ । ಬಾಜಿರಾಯನು ವನದೋಳ್
ಭೋಜನವ ಮಾಡಿಸಿದ ನಾಗ ॥ ॥

ಮಲಸರ್ಜಗುಣಿಸುದಕಲಸದೆ ಕರೆಸಲು ।
ಶೀಲತನದಿ ಬಾರದಿರುವದನ್ನು । ಕೇಳಿ ।
ಮೇಲಾದ್ಹಣ್ಣುಗಳ ಸಕ್ಕರೆಗಳನ್ನು । ಹಾಲು ।
ನಾಲಿಗಿ ರುಚಿಸುವ ಜೀನಸುಗಳನ್ನು ॥

ಕಿತ್ತೂರ್ ದೊರೆಗಳು ।
ಬತ್ತಾಸಿವುಗಳು ।
ಇತ್ತು ಜನಗಳು ॥ ಅನು ।

ಕೂಲಫಲಾಳವ ಸಲಿಸುತಲಿ । ಅಲ್ಲಿ ।
ಲೋಲಾಡಿ ಶ್ರೀಮಂತರೊಲಿವುಲಿ । ಬಂದು ।
ಪಾಲಿಕಿ ಮೌಕ್ತಿಕಮಾಲಿ ಜರತಾರಿಯು ।
ಶಾಲು ಮಲ್ಲೇಂದ್ರಗೆ । ಕೊಡಿಸಿ ಸರ್ವರೊಳು ॥ದುಂ॥

ಭೋಜನವ ಮಾಡಿಸುತಲಾಗ ಶ್ರೀಮಂತರು ।
ಮೋಜಿಲ್ಯಾ ಮಂದಿರದೊಳಿಡಿಸಿ ॥

ಮಲ್ಲೇಂದ್ರ ಸತಿಸುತರನ್ನು ಸೆನೆವ್ರುತೆ ।
ಒಲ್ಲದಾದನು ಆಹಾರವನ್ನು ॥ ॥

೩೨

ಕಿತ್ತೂರ ಪುರದೊಳಗ । ಬತ್ತಿತು ಬಳಗೆಲ್ಲಾ ।
ಎತ್ತ ನೋಡಿದರು ಚಿಂತೆಯಲಿ ॥ ॥

ಬಂದನು ನಡುವಿನ ಮಗ ಬಾಬಾಸಾಹೇಬ ।
ಅಂದಳ ಛತ್ರ ಚಾಮರಗಳಿಂದೆ । ನೋಡಿ ।
ತಂದೆಯನುಳಿದು ಬರುವುದು ಚಿಂದೆ ? । ತನ್ನ ।
ಚಿಂದುಳ್ಳ ಮುಖವ ತೋರಿಸುವನೆಂದ ? ।

ಬಂಧುಬಳಗೆಲ್ಲಾ ।
ಮಂದಿಬಳಗೆಲ್ಲಾ
ತಂದೀಸುಳವಿಲ್ಲಾ ॥ ಯೆಂದು ।

ಸುಂದರಾಂಗನು ಹಿರಿಯಣ್ಣನಾಗ । ದುಃಖ ।
ದಿಂದ್ಹೊರಳಲು ತಾಯಿ ಕೇಳಿ ಬ್ಯಾಗ । ಎನ್ನ ।
ಚಿಂದುಳ್ಳರಸ ಬಾರನೆಂದು ಪುತ್ರನ ಕೇಳಿ ।
ಬಂದಪ್ರಿಯಳಲಿದಳುಳಿಯದೆ ಜನರು ॥ ದುಂದುವೆ ॥

ಎತ್ತ ನೋಡಿದರು ಚಿಂತೆಯುಲಿ ಮಲ್ಲೇಂದ್ರನ ।
ಗೊತ್ತರಿಯದಾಯ್ತು ಸಭೆಯೊಳಗೆ ॥ ॥

ಅಳಿಯನ ಕಾಣದೆ ಸೊರಗಿ । ಅತ್ತೆವ್ವ ।
ಉಳಿದನು ಬರಲಿಲ್ಲಿ ತಿರುಗಿ ॥

೪೪

ಮಾಲಿನ ಮೇಲೇರಿ । ನೋಡಿದರು ದಾರಿಯನು ।
ಲೋಲ ಮಲ್ಲೇಂದ್ರ ಬರುವುದನು ॥ ॥

ಪಟ್ಟದರಸಿಯುಳು । ನಿಟ್ಟುಸುರುಗಳಿಂದೆ ।
ಪಟ್ಟಿಮಂಚದಿ ಹೊರಳುತ್ತಿರಲು । ಯೆನ್ನ ।
ದೃಷ್ಟವ ಸುಡುಸುಡು ಬಳಗದೊಳು । ಕಿಚ್ಚ ।
ಕೊಟ್ಟು ತಾನುಳಿವರೆ ಪುಣೇದೊಳು ॥

ಬಾಯಿ ಬಿಡುವಳು ।
ದೇಹ ಸುಡುವಳು ।
ಮಾಯೆ ಯಿಡುವಳು ॥ ಪ್ರೀತಿ

ಯಿಟ್ಟು ಸೀಲವ್ವನು ಸೊರಗಿದಳು । ರೋಗ ।
ಹುಟ್ಟಿ ದೇಹವು ಕಂದಿ ಕೊರಗಿದಳು । ಪ್ರಾಣ ।
ಬಿಟ್ಟಳು ಮಲ್ಲೇಂದ್ರಗಿಟ್ಟಳು ಮಮತೆಯ ।
ನೆಟ್ಟಗೆ ಶಿವನೊಲವಿಟ್ಟು ಸಾಗಿದಳು ॥ ದುಂದುಮೆ ॥

ಲೋಲ ಮಲ್ಲೇಂದ್ರ ಬರುವುದನು ಕಾಣದಲೆ ।
ಬಾಲರಿದ ನೋಡಿ ಅಳಲುತಲಿ ॥ ॥

ಅತ್ತಿ ಸೀಲವ್ವನ ನೋಡಿ । ಬಳಗೆಲ್ಲಾ ।
ಮುತ್ತಿ ಅಳುತೆ ಮುಖ ಬಾಡಿ ॥

೩೪

ಹೊಂದಿದಳು ಶಿವನೊಳಗ । ಎಂದು ಉತ್ತರ ಬರೆದು ।
ತಂದಿ ಮಲ್ಲೇಂದ್ರಗ ಕಳುಹುತಲಿ ॥

ಬರೆದ ಕಾಗದ ನೋಡಿ । ದೊರಿ ಮಲ್ಲಸರ್ಜನು ।
ಧರೆಯೊಳುರುಳಿ ತಾಯಿ ಪೋದೇನವ್ವಾ । ಪುತ್ರರ ।
ಪರದೇಶಿಗಳ ಮಾಡಿ ಮರತಿರವ್ವಾ । ನಾನು ।
ಮುಗಗುವೆನೆಂಬುದ ತಿಳಿಯದಿರುವಿರವ್ವಾ ॥

ಸೆರೆಯೊಳು ಅತ್ತೆ ।
ನಾನಿರಲು ಮತ್ತೆ ।
ಜಪತಪ ನಿತ್ಯ ॥ ಮಾಡಿ ।

ದೊರಿತನ ಸಿಲಿಸಿ ರಾಜ್ಯ ಗೆಲಿದಿರಲ್ಲ । ನೃಪವುಂ ।
ದಿರದೊಳು ಸತಿಸುತರ ಸಲಹಿದಿರಲ್ಲ । ಹೀಂಗೆ ।
ಇರಲು ಎನ್ನಯ ಶಿರ । ಕೊರೆದು ಪೋದರೆ ಜೀವ ।
ಯಿರುವುದಿನ್ಯಾವ । ಪರಿಯು ಪೇಳೆನಲು ॥ ದುಂದುಮೆ ॥

ತಂದೆ ಮಲ್ಲೇಂದ್ರಗೆ ಕಳುಹಲೀ ಪರಿಯಿಂದೆ ।
ಕಂದಿತು ಮುಖವು ನೆನೆನೆನೆದು ॥

ಅತ್ತತ್ತು ಬಿದ್ದನು ನೆಲಕ । ಹರಿದವು ।
ಮುತ್ತಿನ ಸರಗಳು ಪದಕ ॥

೩೫

ಚಿಂತಿ ಹತ್ತಲು ದೇಹ । ಕಾಂತಿ ಹೋಗಲು ಮನದ ।
ಅಂತತಿಳಿಸದಲೆ ದೊರೆಯಾಗ ॥ ॥

ಸೊರಗಿದ, ಮನದಲ್ಲಿ ಮರುಗಿದ , ದೇಹದ ।
ಕರಗಿದ, ಹಿಂವಜ್ವರ ನೆರೆದು ತಾಪ । ಮೂರು ।
ವರುಷ ವಿರಲು ಪುಣೇದಲ್ಲಿ ಭೂಪ । ತರ ।
ತರ ರೋಗಾಗಲು ಅದನೊಂದು ರೂಪ ॥

ತಿಳಿದನು ತನ್ನ ।
ಮರಣದ ಚಿನ್ಹ ।
ಯೋಚನೆಗಳನ್ನ ॥ ಮಾಡಿ ।

ಹಿರಿಮಗ ಬಾಪು ಸಾಹೆಬಗ ಪಟ್ಟ । ಉಳಿದ ।
ತರಳರಿಗ್ಹೊಂಗಲ ತಿಗಡಿ ಕೊಟ್ಟ । ಉತ್ರಾ ।
ಬರೆದಾಗ ರಾಮಲಿಂಗಪ್ಪನ ಕಳುಹಲು ।
ಬರಲು ಪುರದೊಳು ತಯ್ಯಾರ್ ಮಾಡಿದರಾಗ ॥ ದುಂ ॥

ಅಂತ ತಿಳಿಸದಲೆ ದೊರೆಯಾಗ ಬೇಕೆನುತೆ ।
ಬರೆದ ಪತ್ರವನು ತೋರಿಸುತೆ ॥ ॥

ಸುದ್ದಿ ತಿಳಿಯುರೆಂದು ಪೇಳೆ । ಒಳಗೆಲ್ಲಾ ।
ಮುದ್ದಾ ್ಯಯಿತವನನ್ನು ಕೇಳಿ ॥

೩೭

ರೋಗ ಹತ್ತಿತು ದೊರೆಗೆ । ಬ್ಯಾಗದಲಿ ಶಿಕೆವಿನ್ನು ।
ಆಗುವದು ಬಾಬುಸಾಹೆಬಗ ॥ ॥

ಕರೆಸಿದರೆಲ್ಲರ । ಬರಿಸಿದರ್ ಪುತ್ರರ ।
ತರಿಸಿದರ್ ತುರಗಾನಿ ತೋಪಗಳು । ಆಗ ।
ನೆರಸಿದರ್ ಫೌಜು ಪತಾಕಿಗಳು । ಝುಂಡೇ ।
ಸಿರಿಸಿದರ್ ವರ ನಿಸ್ಪತ್ತರಸುಗಳು ॥

ಕಲ್ಲೂರವರಾಗ ।
ಕನ್ನೂರವರಾಗ ।
ಗುರುಪುತ್ರವರೀಗ ॥ ಕೂಡಿ ।

ಅರಸಿ ಚೆನ್ನವ್ವನು ಸರಸದಲಿ । ಪುತ್ರ ।
ಗರಸ ಮಾಲೆಯನಾಗ ಧರಿಸುತಲಿ । ಸರ್ವ ।
ರ್ಥರಸಲು ತೋಫುಗಳ್ । ಬಿರಸು ಬಾಣಗಳ್ಬಾರಲ್ ।
ವರಿಸಬು ಬಿರುದು ಭಟ್ಟಂಗಿ ಕಾಳಿಗಳು ॥ ದುಂ ॥

ಆಗುವದು ಬಾಪು ಸಾಹೆಬಗ ದೊರಿತಾನ ।
ಸಾಗಿತವನಿಗೆ ಸಂಪದವು ॥ ॥

ಮಗನಿಗ್ಹೇಳುತಲಾಗ ಬುದ್ಧಿ । ಚಿನ್ನವ್ವ ।
ಬಗಿ ತಿಳಿದಳು ಗಂಡನ ಸುದ್ಧಿ ॥

೩೭

ಪುರುಷನಿಲ್ಲದ ವ್ಯಾಳೆ । ಅರಸುತನ ವಿನ್ಯಾಕೆ ।
ತೆರಳಬೇಕೆನುತೆ ದೊರೆಗಳನು ॥ ॥

ಬಕ್ಕನೆ ಪುಣೇದ । ದಿಕ್ಕು ನೋಡುತರಸು ।
ಮಕ್ಕಳ ಸೊಸ್ತೇರ ಬಳಗದ್ಹಿಂಡು । ಸೆರೆ ।
ಇಕ್ಕಿ ಶ್ರೀಮಂತ ಮಾಡಿದನು ಬಂಡು । ಎಂದು ।
ಲಕ್ಕಿಸುತ್ತಿಡಿದಾರು ದಾರಿ ದಂಡು ॥

ಶ್ರೀಮಂತನು ಸೌಗ್ನ ।
ತುಳಸಿಯ ಲಗ್ನ ।
ಮಾಡಿದನು ಆಜ್ಞಾ ॥ ಅಲ್ಲಿ ।

ತಕ್ಕ ರಾಜರನೆಲ್ಲ ಬರಿಸುತಲಿ । ಲಗ್ನ ।
ಇಕ್ಕಿ ಮಲ್ಲೇಂದ್ರನ ಕರಿಸುತಲಿ । ಮನಿ ।
ಪೊಕ್ಕು ನೋಡಲು ದೊರಿ ಸೌಖ್ಯಗಾಣದೆ ದೇಹ
ಶುಷ್ಕವಾಗಲು ನೋಡ್ಹಿಂದಕ್ಕೆ ಬರುವರು ॥ ದುಂ ॥

ತೆರಳಬೇಕೆನುತೆ ದೊರೆಗಳನು ಲಗ್ನದೊಳು ।
ಕರಿಸದಿರು ಯೆನುತೆ ಪೇಳಿದರು ॥ ॥

ಚರರ್ಹೇಳಿದರು ಮಲ್ಲೇಂದ್ರನನು । ಕಳುವೊ ನೀ ।
ಮರಗುವನು ರೋಗದಿಂದವನು ॥

೩೮

ನಾಡಿಗಳ ನೋಡಿದರ । ಬಾಡಿಹವು ಕಳೆಯಾಗ ।
ಪಾಡಿಲ್ಲಪ್ಪಣೆಯ ಕೊಡು ಯೆನಲು ॥ ॥

ಕೇಳಿ ಶ್ರೀಮಂತನು ತಿಳಿಯದಾಯಿತು ಎಂದು ।
ಕಳುಹಿದನು ಮೋಣೆಯೊಳ್ ಗಳಿಗೆಯಲಿ । ಬಂದು ।
ಇಳಿದರೆಡವೂರ ವೀರನ ಪಾದದಲಿ । ಅಲ್ಲಿ ।
ಇಳೆಯೊಳಿಲ್ಲದ ದಾನ ನೀಡುತಲಿ ॥

ಕಣ್ಣು ತೆರೆವುತೆ ।
ತಣ್ಣಗಿರುವುತೆ ।
ಬಣ್ಣಿಸ್ಥೇಳುತೆ ॥ ಮನೆಯ ।

ಬಳಗ ನೊಡುವೆನೆಂದು ಏಳುತಲಿ । ದಾರಿ ।
ಉಳಿಯದಿರುಳಿನೊಳು ಬರುವುತಲಿ । ರಾತ್ರಿ ।
ಗಳೆಯಲಾ ದುರದುಂಡಿ । ಯಿಳಿಯ ಪಾವನ ಮೂರ್ತಿ ।
ಬಳಿಯೊಳ್ ಬರಲು ಪಾದ । ನಳಿನ ಕಾಣುತಲಿ ॥ ದುಂ ॥

ಪಾಡಿಲ್ಲಪ್ಪಣೆಯ ಕೊಡು ಯೆನಲವರ ನೋಡಿ ।
ನ್ನೃಡನೆ ಸಲಹೆಂದು ನಮಿಸುತಲಿ ॥ ॥

ಬಂಧನಗಳನೆಲ್ಲ ಬಿಟ್ಟು । ಸನ್ನಧಿಯೊಳು ।
ಬಂದೆ ಸಲಹು ಕೃಪೆಯಿಟ್ಟು ॥

೩೯

ಚರಣಕೆರೆಗುತ ದೊರೆಯು । ಶರಣು ಮಾಡುತಲಾಗ ।
ಕರುಣ ಪಡೆವುದರೊಳಗೆ ಬರಲು ॥ ॥

ಮಡದಿ ಚನ್ನವ್ವನು । ಪಡೆದ ಪುತ್ರರು ಸೊಸ್ತೆರು ।
ಸಡಗರದಲಿ ಬಂಧು ಬಳಗವೆಲ್ಲಾ । ಛತ್ರ ।
ಕೊಡೆ ಚಾಮರ ಸಾಲಕೀಯನೇರುತಲಿ । ಬಂದ ।
ರೊಡೆಯ ಶ್ರೀ ಅರಭಾಂವಿ ಸ್ಥಾನದಲಿ ॥

ದೊರಿ ನೋಡಲು ।
ಮುಖ ಬಾಡಲು ।
ದುಃಖ ಕೂಡಲು ॥ ಕಯ್ಯ ।

ಹಿಡಿದು ಪುತ್ರರ ಬಿಗಿದಪ್ಪಿದನು । ನಾರಿ ।
ಮಡದಿಯ ಕಣ್ಣೀರನೊರಸಿದನು । ದುಃಖ ।
ಬಿಡು ಮಕ್ಕಳಿರ । ಯೆಂದು । ಒಡೆಯ ದುರದುಂಡಿಯು ।
ವೃಡಗವರೊಡಗೂಡಿ । ಅಡಿಗೆರಗಿದನು ॥ ದುಂ ॥

ಕರುಣ ಪಡೆವುದರೊಳಗೆ ಬರಲುಳಿದ ಜನರು ।
ಹರಹರೆಂದೆನುತೆ ಸ್ತುತಿಸಿದರು ॥ ॥

ಎಣಿಸೆಣಿಸಿದರು ಹಣಗಳನು । ಪಾದದಲಿಟ್ಟು ।
ರೆಣಿಕೆಯಿಲ್ಲದೆ ವರಹಗಳನು ॥

೪೦

ಕಷ್ಟ ಬಡಿಸಿದ ವಾರ್ತೆ । ಅಷ್ಟರೊಳು ಪೇಳುತಲಿ ।
ಹಟ್ಟಿದಾ ಚೆನ್ನವ್ವನು ತಾನು ॥ ॥

ಸತಿಸುತರೊಳು ತನ । ಗತಿ ಪ್ರೀತ್ಯಾಡುತಲಾಗ ।
ನಿತರೊಳಾ ಮತಿಯುತೆ ಸತಿಯುಳಾಗ । ತಂದಾ ।
ರತಿಯೆತ್ತಿ ಪತಿಪಾದ ಸ್ತುತಿಸ್ಯಾಳಾಗ ॥ ಕೇಳೆಂದು ।
ಮತಿವಂತ್ಗುನ್ನತ ಸ್ವಪ್ನ ತಿಳಿಸ್ಯಾಳಾಗ ॥

ನತ್ತಿನೊಳು ಮುತ್ತು ।
ಸುತ್ತಲೊಡೆದಿತ್ತು ।
ಚಿತ್ತಗಲಿಸಿತ್ತು ॥ ನಾನು ॥

ಮತಿಯೊಳ್ ತಿಳಿದು ಸಂತೋಷಿತಳಾಗುತೆ । ಹೀಂಗೆ ।
ನುತೆ ಪೇಳಿ ಪತಿಯ ಸಮ್ಮತ ಮಾಡುತೆ । ಅಲ್ಲಿ ।
ಘೃತಪಾಲು ಪಣ್ಣು ಸಾಬತು ಕಲ್ಲುಸಕ್ಕರಿಂ ।
ದತಿವುಣಿಸಿದರಯ್ಗಳ । ಮಿತಿಯಿಲ್ಲದಾಗ ॥ ದುಂ ॥

ಪಟ್ಟದಾ ಚೆನ್ನವ್ವನು ತಾನು ದಾನವನು ।
ಕೊಟ್ಟಳಗಣಿತವಾದ್ಧಣಗಳನು ॥ ॥

ಬೇಡಿದ ಮನಸಿನ ಇಚ್ಛೆ । ಶಿವ ತಾನು ।
ಕೂಡಿಸಿ ಕೊಟ್ಟನು ಮೆಚ್ಚಿ ॥

೪೧

ದುರದುಂಡಿ ಯತಿವರಗ । ಶರಣು ಮಾಡುತೆ ನಡೆದಾ ।
ಧ್ವರನ ನೆನೆವುತಲಿ ಹೊಂಗಲವ ॥ ॥

ಬಂದರಾ ಪುರದೊಳು । ತಂದಿಮಕ್ಕಳು ಸತಿ ।
ಹೊಂದಿ ಜಂಗಮರೆಡ ಬಲದೊಳಗ । ದೈವ ।
ಹಿಂದೆ ಮುಂದೊದಗಲು ನೋಡಲಾಗ । ದೊರಿ ।
ಬಂದರೆನುತೆ ದೈವ ಕೂಡಲಾಗ ॥

ಜತಿಗೂಡಲು ।
ಪಥ ಹಿಡಿಯಲು ।
ಮುಂದೆ ನಡೆಯಲು ॥ ಬಳ್ಳೀ ।

ಡ್ಡೊಂದಿರು ವೀರನ ಸುತ್ತಿಸುತಲಿ । ಸಲ ।
ಹೆಂದು ಬಂಗಾರ ಬೆಳ್ಳಿಯಿಡುವುತಲಿ । ಈ ಅ ।
ನಂದದಿ ಬರಲು ಮಲ್ಲೇಂದ್ರನ ದೇಹದೊ ।
ಳ್ಳೊಂದಿತು ವಾಧ್ಯಿಯೆಷ್ಟೊಂದುಳಿಯದಲೆ ॥ ದುಂ ॥

ಹರನ ನೆನೆವುತಲಿ ಹೊಂಗಲವ ಬಿಡುವುತಲಿ ।
ಶರೀರದೊಳು ರೋಗ ಹೆಚ್ಚುತಲಿ ॥ ॥

ತಿಳಿಯವಲ್ಲದು ವ್ಯಾಧಿಮೂಲ । ಅರಸನ ।
ಯೆರಡು ದದ್ದರಿಸ್ಯಾವು ಕಾಲ ॥

೪೨

ಹತ್ತುಸಾವಿರ ಜನರು । ದುಃಖಿಸಿಕೊಳುತಾಗ ।
ಕಿತ್ತೂರ ಪುರವ ಕಾಣುತಲಿ ॥ ॥

ಓಡಿ ಬರಲು ದಾರಿವಿಡಿದು ದಿವಾನನು ।
ನಾಡಿವಿಡಿದು ತಾನು ನೊಡುತಲಿ । ಎನ್ನ ।
ಒಡೆಯನ ಬಲ ತೀರಿತೆನ್ನುತಲಿ । ಮುಖ ।
ಬಾಡಿಕಣ್ಣುಗಳಾಗ ತೆರೆವುತಲಿ ॥

ಮುಜರಿ ಮಾಡಿದಾ ।
ದೊರಿ ನೋಡಿದಾ ।
ಮಾತನಾಡಿದಾ ॥ ತೋಫು ।

ಜೋಡಿಲ್ಲಾರುವದೇಕೆ ಸದರಿನೊಳು । ದಡ ।
ವಡಲೆನ್ನುವ ಸಪ್ಪಳೆನ್ನಿದಿರಿನೊಳು । ಕೇಳು ।
ತೊಡೆಯನೆ ಲಾಲಿಸು । ಹೊಡೆವನು ಪೇದ್ರು ನಿ ।
ಮ್ಮಡಿಗಳ ನೋಡಲು ।ಬಿಡದೆ ತೋಪಗಳು ॥ ದುಂ ॥

ಕಿತ್ತೂರ ಪುರವ ಕಾಣುತಲಿ ದೊರೆಯಾಗ ।
ಮತ್ತಾ ದಿವಾನರನು ನೋಡಿ ॥

ಕಣ್ಣೀರುದುರಿಸಿ ಪೇಳದನು । ಮಲ್ಲೇಂದ್ರ ।
ಸಣ್ಣ ಮಕ್ಕಳ ಜೋಕಿವರರನು ॥

೪೩

ದುಃಖ ಮಾಡುತೆ ಯೆಲ್ಲ । ರ್ಖೊಕ್ಕರೊಡೆಯರ ಚೌಕಿ
ಮುಕ್ಕಣ್ಣ ಗುರುವ ಮಠದೊಳಗೆ ॥ ॥

ಮುತ್ತಿತು ಬಲ ಸತಿ। ಪುತ್ರರು ದೊರಿ ಮುಖ ।
ಎತ್ತಿ ನೊಡಲು ದಶಾವಸ್ಥೆಗಳು ।ಆಗಿ ।
ರುತ್ತಿರಲೆದೆ ಬಾಯಿ ಬಿಡುತೆ ದಳ । ವೊದ ।
ರುತ್ತಳಲುತೆ ತೊತ್ತು ಹಿಂಡುಗಳು ॥

ಅರಮನಿ ಪೊಕ್ಕು ।
ಮಲ್ಲೇಂದ್ರಗ ಬಿಕ್ಕು ।
ಹತ್ತುತಲಿ ದಿಕ್ಕು ॥ ತಪ್ಪಿ ।

ತಿತ್ತ ಪೋಗಲಿ ಚೆನ್ನವ್ವ ಸೊಸ್ತೆರಾಗ । ದೊರೆಯ ।
ಸುತ್ತ ಪುತ್ರರು ಮುತ್ತಿ ಬಳಗವಾಗ । ನೋಡಿ ।
ರಿತ್ತ ಕಣ್ಗಳ ತಿರು।ವುತ್ತಾರೆನುತೆ ಸರ್ವರ್ ।
ಜತ್ತಾಗಿ ದುಃಖಕ್ಕೆ । ಪಾತ್ರರಾಗುತಲಿ ॥ ದುಂ ॥

ಮುಕ್ಕಣ್ಣ ಗುರುವ ಮಠದೊಳಗೆ ಬರಲವರು ।
ತಕ್ಕ ಸಮ್ಮತವ ಗೊಳಿಸಿದರು ॥ ॥

ಬಡಕೊಳ್ಳ ಬ್ಯಾಡೆನ್ನತಾಯಿ । ಪ್ರಾಣವ ।
ಬಿಡತಾರು ಮಲ್ಲದೇಸಾಯಿ ॥

೬೪

ಮರುದಿವಸದೊಳು ದೊರಿಯು । ಅರುಣೋದಯಕಾಲಕ್ಕೆ ।
ಮರಣ ಹೊಂದಿದನು ಮಲಸರ್ಜ ॥ ॥

ಚಂದಿರನನು ರಾವು ಹೊಂದಿ ತೋರದಂತೆ ।
ಕಂದಿ ಹೋಯಿತು ಮುಖ ಮಲ್ಲೇಂದ್ರನು । ಶಿವನ ।
ನ್ನೊಂದಿದ ಲೋಕದೊಳಮರೇಂದ್ರನು । ರಾಜ ।
ತಂದೆ ಶೀರಲು ಮೂಗ ಸುಂದರನು ॥

ಭೂಪ ಮಡಿಯಲು ।
ತೋಫು ಹೊಡೆಯಲು ।
ರೂಪು ಅಡಗಲು ॥ ದೊರಿಯ ।

ತಂದರು ಸದರಿನೊಳಗೆ ಪುತ್ರರು । ಬಂದು ।
ತಂದೀ ಅಪ್ಪಲು ಸುಂದರ ಗಾತ್ರರು । ಎಂದ ।
ರಿಂದು ಶಿವನಃ ಹೊತ್ತು । ತಂದನೆನುತೆ ಬಳಗ ।
ಬಂಧುಗಳುಳಿಯದೆ । ಮಂದಿ ದುಃಖಿಸಲು ॥ ದಾಂ ॥

ಮರಣ ಹೊಂದಿದನರಸು ಆಗ ಹರಹರ ಎನುತೆ ।
ಮರುಗಿದರು ನಿಸ್ಪತ್ತ್ರರು ನೆರೆದು ॥ ॥

ಮುಕ್ಕಣ್ಣ ಮುನಿದನಿಂದೀಗೆ । ನಮಗೀಗ ।
ದಿಕ್ಕು ತಪ್ಪಿತು ಮುಂದಿನ್ಯಾಂಗ ॥

೪೫

ದೊರೆಯ ಸಿಂಗರಿಸಿದರು । ಶರಣಜನ ಕೂಡ್ಯಾಗ ।
ಪರಿಪರಿಯ ತಾರಿಪವ ಮಾಡಿ ॥ ॥

ಕೋರಿವಿಸಾಸಿಯು ನೂರು । ವರದ ಕವಚವನಿಟ್ಟು ।
ಸುರತಿ ಮುತ್ತಿನ ಕಂಠಿ ಕೊರಳೊಳಗೆ । ತಲೆಗೆ ।
ಶಿರಪೇಚೊಜ್ರದವುಂಗುರ ಬೆರಳೊಳಗೆ । ಬರಿ ।
ಜರತಾರಿ ಮುಂಡಾಸ ಶಿರದೊಳಗೆ ॥

ಶಾಲುಗಳ ಹೊಚ್ಚಿ ।
ಹಸ್ತದೊಳು ಪೋಚಿ ।
ಧರಿಸಿದರುಚ್ಚಿ ॥ ಹೂವಿನ ।

ಹಾರಮಾಲಿಯ ಭಸಿತವ ಧರಿಸಿ । ತರ ।
ತರದ ಪರಿಮಳ ಕಸ್ತೂರಿಯ ಸುರಿಸಿ । ಥಾಲು ।
ಸುರಗಿ ಕೊಡಲು ಜಂಗಮರು ಹರಸಲು ಭಿಕ್ಷ ।
ವರಗಳಿಡಲು ಜನ । ಸರಿದು ನಿಲ್ಲಿಸುತ ॥ ದುಂ ॥

ಪರಿಪರಿಯ ತಾರಿಪವ ಮಾಡಿ ಮಲಸರ್ಜನ ।
ಸರಿಯಿಲ್ಲೆನುತ್ಹೊಗಳಿ ಬಿರುದುಗಳು ॥ ॥

ತುರಗಾಗಿ ರಥ ಪತಾಕಿಗಳು । ಎಡಬಲ ।
ಪರೆಗಟ್ಟಿ ಒದರಿ ಭೇರಿಗಳು ॥

ಳಿಕಿ

ಪಟ್ಟದರಸಿಯ ದುಃಖ । ಎಷ್ಟು ಹೇಳಲಿ ಸದರ ।
ಕಟ್ಟೆಗ್ಗಣಿಬಡಿದುರುಳಿ ಬಿದ್ದು ॥ ॥

ಸತಿಯು ಚೆನ್ನವ್ವನು । ಪತಿಯ ಪಾದದಿ ಹೊರ ॥
ಳುತ ಪರದೇಶಿಮಾಡಿ ಕ್ಷಿತಿಯೊಳಗೆ । ಇಟ್ಟು ।
ಹಿತದಿಂದೆ ಕೂಡಿದಿ ಹರನೊಳಗೆ । ಮುಂದೆ ।
ಗತಿಯೇನೆನಗೆ ಸರಿ ಸತಿಯರೊಳಗೆ ॥

ಮುಖ ಬಾಗಿತು ।
ಸುಖ ನೀಗಿತು ।
ದುಃಖ ಸಾಗಿತು ॥ ಎಂದು ।

ಸುತರ ತೆಕ್ಕೆಸಿ ನೆಲಕುರುಳುತಲಿ । ದೇಹ ।
ಸ್ಮೃತಿ ತಪ್ಪಲೊಳಗೊಯ್ದು ಇರಿಸುತಲಿ । ಅಲ್ಲಿ ।
ಪತಿ ಬಾರೆನುತೆ ಮಂದ । ಮತಿಯಿಂದಾಡುತೆ ಇದ್ದ
ಸತಿಯರು ಉಪಚರಿ । ಸುತಲೆ ನೋಡಿದಳು ॥ ದುಂ ॥

ಕಟ್ಟೆಗ್ಗಣೆಬಡಿದುರಳಿ ಬಿದ್ದೆಚ್ಚರವಾಗಿ ।
ನಿಟ್ಟುಸುರುಗಳೆದು ಪೇಳಿದಳು ॥ ॥

ಗಂಡನಿಲ್ಲದಿರುವುದು ಕಷ್ಟ । ಮಂದಿರದೊಳು ।
ಬಂಡಾಗಿರುವದೆನ್ನದೃಷ್ಟ ॥

೪೨

ಎಲ್ಲ ಮಕ್ಕಳ ಕರೆದು ಕಲ್ಲುಮಠ ಪ್ರಭುದೇವ ।
ನಿಲ್ಲದೊಳಿಯಕ್ಕೆ ಕರೆದೊಯಿದು ॥ ॥

ತಾಯಿ ಮಕ್ಕಳು ಕೂಡಿ । ಬಾಯಿ ಬಿಡುವುದ ಕಂಡು ।
ಮಾಯಾ ಬಿಡಿರಿ ದೂರಿ ಹರನೊಳಗ । ಕೂಡಿ ।
ಕಾಯ ಬೆರಸಿ ಮುಕ್ತಿ ಗಳಿಸಿದೀಗ । ಬಹಳ ।
ಸಾಯಸ ಮಾಡ್ಬೇಳಿ ಸಮಸ್ಯಾರಾಗ ॥

ದೂತಿಯರು ಬಂದು ।
ತಾಯೆ ಕೇಳೆಂದು ।
ಶಾಂತಿ ತಾಳೆಂದು ॥ ಪೇಳಿ ।

ಕಾಯುದೊಳಿಡು ವಸ್ತ್ರಾಭರಣಿಡಿಸಿ । ಎತ್ತಿ ।
ಕೈಯೊಳು ಕರ್ಪುರಾರತಿ ಪಿಡಿಸಿ । ಬಂದು ।
ಸುಯ್ಯ್ಯಗರೆದು ಪತಿಯ । ಬಾಯ ನೋಡುತೆ ಎದಿ ।
ಬಾಯಿ ಬಡಿವುತೆ ನೀನು । ಸಾಯುವರೆ ಎನುತೆ ॥ ದುಂ ॥

ನಿಲ್ಲದೊಳಯಕ್ಕೆ ಕರೆದೊಯ್ದು ಪುತ್ರರು ಬಂದು ।
ನಿಲ್ಲುವರ ತಂದೆಯೆದುರಿನಲಿ ॥ ॥

ಎತ್ತಿದಳಾರತಿ ಪಿಡಿದು । ಪೋಗ್ವರೆ ಸತಿ ।
ಪುತ್ರರುಗಳ ಬಿಟ್ಟು ಮಡಿದು ॥

೪೮

ಹರದೇಶಿತನ ಮಾಡಿ । ಹರನೊಳಗೆ ಕೂಡುವದು ।
ತರವೆ ನಿನಗಿಂಥ ದೊರೆತನವು ॥ ॥

ಒಡತಿ ಚೆನ್ನವ್ವ ಆರ್ಭಡಿಸ್ಯಳುವುದ ಕಂಡು ।
ನಡುವಿನ ಪುತ್ರನು ಪಿಡಿದನಾಗ । ಕೈಯ ।
ಬಡಕೋಬ್ಯಾಡ ತಾಯಿ ನೋಡಿರೀಗ । ಮೋರಿ ।
ಬಿಡದಡಗುವದು ಮೃತ್ತಿಕೆಯೊಳಗ ॥

ಧರ್ಮ ಮುಳುಗಿತು ।
ಕರ್ಮ ಬೆಳೆದಿತು ।
ಮರ್ಮತಿಳಿದಿತು ॥ ಯೆಂದು ।

ಕೂಡಿದರರಸು ನಿಸ್ಪುತ್ರರಾಗ । ತಾವ್ ಬೋ ।
ರ್‍ಯಾಡ್ಯಳುವರು ಪುಣೇದವರು ಆಗ । ಎಂದ ।
ರೊಡೆಯ ನಿನಗೆ ಶಾಪ । ಕೊಡುವರಾರೆನುತೀಗ ।
ಮಡದಿ ಚೆನ್ನವ್ವನು ಗಡಬಡಿಸಿದಳು ॥ ದುಂ ॥

ತರವೆ ನಿನಗಿಂಥ ದೊರೆತನವು ನನ್ನನು ಬಿಟ್ಟು ।
ಪರಶಿವನೊಳಡಗಿ ಪೋಗುವದು ॥ ॥

ಮೋರಿ ನೋಡುತೆ ಮುಂದೆ ಬಾಗಿ । ಶವದ ಮ್ಯಾ ।
ಲೊರಗಿ ಬೀಳಲು ತಾನು ಸಾಗಿ ॥

೪೯

ಪುರುಷನನು ಬಿಗಿದಪ್ಪಿ । ಅರಸನಿನ ಗುಣಗಳನು ।
ಒರೆದರೆಷ್ಟೊ ತೀರದೆನುತಾಗ ॥ ॥

ಮುತ್ತಿನ ಸೆರಗಿನ । ಸಿರಿಯೊಳ್ ಜರತಾರಿ ।
ರತ್ನಖಚಿತ ಹೆಳಲು ಬಂಗಾರವ । ಹಾರ
ಪುತ್ತಳಿ ನೆಲ್ಲಿ ಮುತ್ತಿನ ಸರವ । ಪತಿ ।
ವಸ್ತುಗಳುಳಿಯದೆ ಶ್ರೀಂಗಾರಪ ।

ಮಾಡಿ ನೋಡುವಿ ।
ಸುಖ ಆಡುವಿ ।
ರತಿ ಗೂಡುವಿ । ಲಗ್ನ ।

ಮೂರ್ತ ತೆಗಿಸಿ ಆರ್ತಿ ಆಗಲೆಂದು । ಈಸಾ ।
ಹಿತ್ಯಮಾಡಿಸಿ ಕನ್ಯಾ ತೆಗೆದಿರಂದು । ಸಣ್ಣ ।
ಪುತ್ರನ ವಿವಹ ಮಾ । ಡದೆ ಈಗ ಶಿವನೊಳು ।
ಸತ್ತು ಹೋಹರೆ ಯೆನ್ನ । ಕುತ್ತಿಗಿ ಕೊರೆದು ॥ ದುಂದುಮೆ ।

ಒರೆದರೆಷ್ಟೊ ತೀರದೆನುತಾಗ ಚೆನ್ನವ್ವನು ।
ತರತರದಿ ನೆನೆದು ಅಳಲುವಳು ॥

ಅರಭಾಂವಿ ಮಠದೊಳು ಕೂಡಿ । ಮಾತಾಡಿದಿರಿ ।
ಸರಿ ಸುಮ್ಮನಾದಿರಿ ನೋಡಿ ॥ ॥

## ೫೦

ಕಣ್ಣು ತೆರೆದೀಗ ನೋ । ಡೆನ್ನ ಸುಂದರ ದೇಹ ।
ಮಣ್ಣುಪಾಲಾಗಿ ಹೋಗುವದು ॥ ॥

ಹೊರಳುವಳ್ ಹೆಣದ ವ್ಯಾ । ಲೊರಲುವಳ್ ನೆನಿನೆನಿ ।
ದುರುಳುವಳ್ ಧರೆಯೊಳು ಮರಳಿ ತಾನು । ಸುತ್ತಿ
ಸುರುಳಿಗೊಳ್ಳುತಲೊಮ್ಮೆ ತೆರಳುಗಣ್ಣು । ವಜ್ರ ।
ದ್ಹರಳಿನಾಭರಣಗಳ ಹರಿವಳಿನ್ನು ।

ಕಂಬುಗೊರಳಿಯೊ ।
ಈ ಗುಂಗುರುಳಿಯೊ ।
ಮನ ಮರಳಿಯೊ । ಹೊಟ್ಟೆ ।

ಕರಳು ಬಗಿದಿಡುತೆಚ್ಚರ ಮರೆದು । ಹಗ ।
ಲಿರುಳೆಂಬುದರಿಯದೆ ದೊರೆಯ ಕರೆದು । ಕೊಂಬ ।
ಳೊರಲುತೆ ಪತಿಯಗ । ಲಿರಲಾರೆನೀ ಜನದಾ ।
ಗ್ಹರಲಿ ಹೊತ್ತೆನು ಹರ । ಹರ ಯೆಂದಳಾಗ ॥ ದುಂದುಮೆ ॥

ಮಣ್ಣು ಪಾಲಾಗಿ ಹೋಗುವದು ನನ್ನನು ಬಿಟ್ಟು ।
ತಣ್ಣಗಾದೀತು ನಿಮಗೆನುತ ॥

ಸುಳವು ಕಾಣದೆ ಹೋಯಿತವ್ವಾ । ಪುರುಷಗ
ಅಳಿವು ತಂದವರ್ಯಾರ್ಹೇಳವ್ವಾ ॥

## ೫೧

ವ್ಯೋಮ ಯಾನವ ಕಟ್ಟಿ । ಸಾಮಾನುಗಳ ಮಾಡಿ ।
ಹಮರು ಬರ್ಜರಿಗಳಿಂದಾಗ ॥

ಏಳು ನೆಲೆಗಳು ನಿ । ವಳವಾಗಿ ತರತರ ।
ಹಳದಿ ಹಸರು ಕೆಂಪು ಬಳಿದರಿಂದ । ಬಣ್ಣ ।
ಚಳಿ ಮುತ್ತು ಜಾಲಾರ ಸುಳುವಿನಿಂದ । ಮೇಲಿಂ ।
ದಿಳಿಯಿತೆಂಬಂತ್ಹೊಳ ಹೊಳವುದರಿಂದ ।

ಜಳಜಳಿಸುತೆ ।
ತಳತಳಿಸುತೆ ।
ಕಳಸಿಡುವುತೆ ॥ ಅಲ್ಲಿಂ ।

ಮುಳಿದು ಸಮಾಧಿಯೊಳ್ ಹಂದರವ । ಹಾಕಿ !
ತಳಿರು ತೋರಣಕಟ್ಟಿ ಸುಂದರವ । ರಂಗ ।
ವಾಲಿಯಿಕ್ಕುತೆ ಪತ್ರಿ । ವಿಭೂತಿ ರುದ್ರಾಕ್ಷಿ ।
ಮಾಲೆಗಳ ಧರಿಸಿ ವಿ । ಶಾಲ ಮಾಡಿದರು ॥ ದುಂದುಮೆ ॥

ಹಮರು ಬರ್ಜರಿಗಳಿಂದಾಗ ವಿಸ್ತರಿಸುತ
ಸಮಾಧಿ ಕಸ್ತುರಿ ಜವಾದಿ ತೀಡಿ ॥

ಚಿತ್ರ ಬರೆದರು ಸುತ್ತುಗಟ್ಟಿ । ಒಳಹೊರ
ಗೆತ್ತಲು ಕೈಲಾಸ ಸೃಷ್ಟಿ ॥

೫೨

ಮಲ್ಲದೊರೆಯು ವಿಮಾನ । ದಲ್ಲಿಡಲು ಎಡಬಲದಿ ।
ಜಲ್ಲಿ ಕುದುರೆಗಳಾಗ ಹೊರಡಿಸಲು ॥ ॥

ಮುರಮುರ ಮುರುಗುತೆ । ಹರದಿ ಚೆನ್ನವ್ವನು ।
ವರ ಮಕ್ಕಳ್ ನಿಸ್ಪತ್ತರರಸರ್ಹಿಂಡು । ಆನಿ ।
ತುರಗ ರಥವು ಪರಿವಾರ ದಂಡು । ತೋಫು ।
ಕರವೂಲಿ ಬಂದೂಕ ಮದ್ದುಗುಂಡು ।

ವಾದ್ಯದಬ್ಬರವೆಲ್ಲ ।
ಹರದಾರಿಯು ಸೊಲ್ಲ ।
ಕೇಳುವದು ಎಲ್ಲ ॥ ಮೋರ್ಚಾ ।

ಲ್ವಾರುವವು ಬಟ್ಟಂಗಿ ಬೀರುತಲಿ । ಮುತ್ತು
ಹಾರಿಸುವರು ಮೇಲಕ್ಕೇರುತಲಿ । ವೀಳ್ಯೆ ।
ದಾರಿ ಮುಚ್ಚಲು ಹೂವು । ಸೂರಿಗೊಡಲು ನಡೆ
ದಾರು ಸರ್ವರು ಪರಿ । ವಾರವುಳಿಯದೆ ॥ ದುಂದುವೆ ॥

ಝಲ್ಲಿ ಕುದುರೆಗಳಾಗ ಹೊರಡಿಸಲು ಮಠದೊಳಗೆ ।
ಮಲ್ಲೀಂದ್ರನನಾಗ ತರುವುತಲಿ ॥

ಗುರುದೈವ ಹರಸುತೆ ಬಂದು । ಸಮಾಧಿಯೊಳ್
ದೊರೆಯನಿಳುಪಿದರು ತಂದು ॥

೫೩

ಉಳಿದ ಜನರು ಸಮಾಧಿ । ಯೊಳಗೊಯ್ದು ದೊರಿ ಮೂರ್ತ ।
ಗೊಳಿಸಿದರಾಭರಣಗಳ ತೆಗೆದು ॥

ಚೆಂದದಿ ಮುಖ ನೋಡಿ । ರೆಂದನಲಾ ಸತಿ ।
ಬಂದು ಹವ್ವನೆ ಹಾರಿ ಇದಿರಿನೊಳು । ನಿಂತು ।
ಇಂದು ತೀರಿತೆ ನಿನ್ನ ರಿಣ ಎನ್ನೊಳು । ಪುಣೇ ।
ದಿಂದ ಬಂದೆನ್ನಯ ಸುರತದೊಳು ।

ಕೂಡಿ ಇರಲಿಲ್ಲ ।
ರತಿ ಬೆರಿಲಿಲ್ಲ ।
ಶಿವ ಬಿಡಲಿಲ್ಲ ॥ ನಿನ್ನ ।

ಕೊಂದು ಬಾಳುವ ನನ್ನ ಜನ್ಮವನು । ಸುಡು ।
ಎಂದು ಕಾಣುವೆ ನಿನ್ನ ಸಂಗವನು । ನಮ್ಮ ।
ತಂದಿ ತಾಯ್ಗಳು ನಿನ್ನ । ಸುಂದರತನ ನೋಡಿ ।
ಹೊಂದಿಸಿದರು ಯೆನಗೆ । ವರವಾಗಲೆನುತ ॥ ದುಂದುಮೆ ॥

ಗೊಳಿಸಿದರಾಭರಣಗಳ ತೆಗೆದು ಬಿಸುಟಿದಳು ।
ಕಳೆವರ ನಿನ್ನಗಲಿರುವದಾಯ್ತೇ ॥

ಪಡೆದಿದ್ದೆನವ್ವ ಹಿಂತದನು । ಹಗಲಿರು ।
ಳೊಡೆಯನ ಕಾಣದಿರುವದನು ॥

೫೪

ಅರಸನ್ಹೊಟ್ಟೆಲೆ ಹುಟ್ಟಿ । ಪುರುಷನೆನಿಸುತೆ ಮೂರು ।
ವರುಷ ತಡೆದಿರುವಿ ಪುಣೆಯದೊಳು ॥

ಪಡೆದು ಬಂದಿರಿ ರಾಜ್ಯ । ಕಡಿಮಿಲ್ಲ ದವಲತ್ತು
ಸಡಗರವನು ಬಿಟ್ಟು ವ್ಯಡನೊಳಗ । ಕೂಡೆ
ನ್ಹೊಡನಿರುವ ಹಂಬಲ ಬಿಡುವಿರೀಗ । ನಾನು ।
ಕಡಲೋಳ್ ಧುಮುಕಿ ಪ್ರಾಣ ಬಿಡುವೆನೀಗ ॥

ಬಂತೆನಗ ದಾಳಿ ।
ರತ್ನದ ಗುಳದಾಳಿ ।
ಮೂಗಿನ ಜುಳಜುಳಿ ॥ ಹರಿ ॥

ದಿಡುತ ಕಾಜಿನ ಬಳಿ ಒಡಿದಳಾಗ । ಆ
ಭರ್ಡಿಸಿ ಹಾಯಲು ಜನ ಹಿಡಿದರಾಗ । ಕಟ್ಟಿ ।
ಕಡೆಗೆ ಪ್ರಾಣಕಾಂತ । ನಡಿಗೆರಗುತೆ ಮಣ್ಣು ।
ಬಿಡದೊಗಿದಳು ದೊರಿ । ಮಡದಿಯುಳಾಗ ॥ ದುಂದುಮೆ ॥

ವರುಷ ತಡೆದಿರುವಿ ಪುಣೆಯದೊಳು ಬಂದೀಗ ।
ಮರೆತು ಪ್ರೋಗುವರೆ ಬಳಗವನು ॥

ಆರುತಿ ಬೆಳಗುತೆ ತಿರುಗಿ । ನಡೆದಳು ।
ಆರಮನೆಯೊಳು ಬಂದು ಮರುಗಿ ॥

೫೫

ಮೂರೂಮಕ್ಕಳು ತಂದಿ । ಮಿಾರಿ ಹೋದನು ಎನುತೆ ।
ಘೋರಿಡುವರಗಲಿದೀಗೆನುತೆ ॥ ॥

ಪುತ್ರರೆಸೆವ ನಿಸ್ಪತ್ತರು ಸಿಪಾಯ್ಗಳ ಹಿಂಡು ।
ಮುತ್ತಿತು ಬಲ ಸುತ್ತುಮುತ್ತಲಾಗ । ಮೋರಿ ।
ಯೆತ್ತಿ ದೊರೆಯು ನೋಡಿರೆಂದರಾಗ । ದವ ।
ಲತ್ತು ಮುಳುಗಿ ಹೋಯಿತಿಂದಿಗೀಗ ॥

ಬಾಪೂ ಸಾಹೇಬ ।
ಬಾಬಾ ಸಾಹೇಬ ।
ಬಾಳಾ ಸಾಹೇಬ ॥ ತಂದೆ ।

ಕುತ್ತಿಗಿ ಕೊಯಿದ್ಹೋಗೂದುತ್ತಮವೇ ? । ಹೀಂಗ
ಳುತ್ತಣ್ಣ ತಮ್ಮರಿನ್ನೆಲ್ಲಿರುವೆ ! । ಇಂದು ।
ಹೊತ್ತು ತಂದನು ಶಿವನೆ । ನುತ್ತೆ ಎಲ್ಲರು ಮರು ।
ಗುತ್ತೆ ಸಮಾಧಿಗೆ । ಮೃತ್ತಿಕೆ ತುಂಬಿ ॥ ದುಂದುಮೆ ॥

ಘೋರಿಡುವರಗಲಿದೀಗೆನುತೆ ಭಿಕ್ಷಗಳ ।
ಸೂರಿಗೊಡುತೊರಗಳ್ಹಣಗಳನು ॥

ಮುತ್ತು ರತ್ನವ ಕುದುರಿ ಆನಿ । ದಾನವನೀ ।
ಯುತ್ತೆ ನಡೆದರು ರಾಜಧಾನಿ ॥

೫೬

ಅರಮನೆಯೊಳಗೆ ಬಂದು। ನೆರೆದರೆಲ್ಲರು ತಾಯಿ।
ಧರೆಯೊಳುರುಳ್ವುದನು ಕಾಣುತಲಿ ॥

ನಡುವಿನ ಮಗನೆನ್ನ। ಹಡೆದಿರುವ ತಾಯಿಯೆ।
ಬಡಕೋ ಬೇಡವ್ವೀಗ ತಂದೆಯರು। ಹರ।
ನೊಡನೆ ಬೆರೆವು ತಾವು ಹೊಂದಿಹರು। ಚಿಂತೆ
ಬಿಡು ಪುತ್ರರಿರುವೆವು ಸುಮ್ಮನಿರು ॥

ಎಂದು ನಮಿಸುತೆ।
ಶಾಂತಿಗೊಳಿಸುತೆ।
ದೊರಿ ಮರೆಸುತೆ ॥ ಸೊಸ್ತೆರು।

ಅಡಿಗೆಯೆರಗಿ ಅತ್ತೀ ಶೋಕವನು। ಕೂಡಿ
ಬಿಡಿಸೆ ತೊತ್ತುಗಳ್ ಬಾಪೂಸಾಹೇಬನು। ತಾಯಾ।
ಹಡದವ್ವ ನೀಯೆನ್ನೊ। ಳೊಡನೆ ರಾಜ್ಯವನಾಳಿ।
ಬಿಡದೆ ಸಲಹು ಸಣ್ಣ। ಹುಡುಗರನಿನ್ನು ॥ ದುಂದುಮೆ ॥

ಧರೆಯೊಳುರುಳ್ವುದನು ಕಾಣುತಲಿ ಚೆನ್ನವ್ವನು।
ಹರಸಿದಳು ಮಗನ ದೊರೆತನವ ॥

ಆಳಿರುವದು ರಾಜ್ಯ ಮುಂದ। ಸಾಧಿಸಿ।
ಗಳಿಸಿಕೋ ಹಣಗಳಾನಂದ ॥

೫೭

ಕುಲಶರ್ಜಗಧಿಕೆನಿಸಿ। ಬೆಳಸಿದರು ದವಲತವ।
ಇಳೆಯೊಳೆಣೆಯಿಲ್ಲದಿರುತಿರಲು ॥

ಕುಂಪಣಿ ಶಕವಾಗ । ಗುಂಪಾಗಿ ಸಾಹೇಬರ್ ।
ಕೆಂಪು ಮೋರೆಯವರು ಜಂಪಿನಲಿ । ರಾಜ್ಯ ।
ಗುಂಪು ಗಳಿಸುತಾಗ ಬರುವುತಲಿ । ಸ್ಥಲ ।
ತಂಪು ಕಾಣುತೆ ಡೇರೆ ಹೊಡೆಯುತಲಿ ॥

ಇಳಿಯಲು ದಂಡು ।
ಸೋಲ್ಜರರ ಹಿಂಡು ।
ಭಯವನು ಕಂಡು ॥ ಜನ ।

ಕಂಪಿಸ್ಯೋಡುತ್ತವರಿಂಪು ನೋಡಿ । ರಥ ।
ತೋಫು ಬಂದೂಕವು ತುರಗ ಗಾಡಿ । ತಂಬೂ ।
ಸಂಪಿಲೊದಗಲು ಬ । ಣ್ಣಂಪುದೊಡುಗೆಗಳು ।
ಕೆಂಪು ಕರಿದು ಭಯಂಕರದಿ ತೋರುವದು ॥ ದುಂದುಮೆ ॥

ಇಳೆಯೊಳೆಣೆಯಿಲ್ಲದಿರುತಿರಲು ಇಂಗ್ರಜರಾಗ ।
ಬೆಳವಡಿಯ ಸ್ಥಳದಿ ಇಳಿಯುತಲಿ ॥

ಎತ್ತೆತ್ತ ನೋಡಲು ಫೌಜು । ನೆರೆವುತೆ ।
ಮುತ್ತಿತು ಸರದಾರ ಬಾಜು ॥

ಖಿಲ

ಧರ್ಮಪದ್ಧತಿ ಹಿಡಿದು । ಮರ್ಮತಿಳಿದಾಳುವರು ।
ಕರ್ಮವೆಳ್ಳನಿತು ತೋರದಲೆ ॥

ಜ್ಞಾನ ಮಂಡಲ ಸಾಹೆಬನೆಂಬ ಸರದಾರ
ಕೂನವರಿತು ದೈವ ಪಾಲಿಸುತೆ । ರೈತ ।
ಜನರ ಮಾತುಗಳನ್ನು ಲಾಲಿಸುತೆ । ದುಃಖ ।
ವೇಸು ತೋರದೆ ಸುಖ ತೋರಿಸುತೆ ॥

ಸಾಧಿಸಲು ನಾಡು ।
ಆಳುವರು ಪಾಡು ।
ಇನ್ನಿವರ ಜೋಡು ॥ ಕಾಣೆ ।

ನೇನು ಜುಲುಮಿ ದಂಡ ದ್ರೋಹಗಳು । ಇಲ್ಲ ।
ದನುಮತ ನಡಿಸು ವಿಸ್ತಾರಗಳು । ನೋಡಿ ।
ನೆನಿಸುವರ್ ಸರಕಾರ । ಅನುವ ತಿಳಿದು ನಾಡ ।
ಜನರ್ಧರಸುತೆ ಇಂಥಾ । ದನು ಕಾಣೆವೆನುತ ॥ದುಂದುಮೆ॥

ಕರ್ಮಯೆಳ್ಳನಿತು ತೋರದಲೆ ನಡಿಸುವರು ।
ಅಮ್ಮ ರಾಣಿಯರ ಹುಕುಮಿನಲಿ ॥

ಸತ್ಯವೆಂಬುದ ತಾವು ತಿಳಿದು । ನ್ಯಾಯದ ।
ಇತ್ಯಾರ್ಥಾಗುವದನ್ಯಾಯಳಿದು ॥

೫೯

ಕಿತ್ತೂರ ಪುರದರಸು । ಪುತ್ರ ಬಾಪುಸಾಹೇಬ ।
ವರ್ತಮಾನವನು ತಿಳಿದಾಗ ॥

ತಟ್ಟನೆ ಕಿತ್ತೂರ ಪಟ್ಟಣ ನಿಸ್ಪತ್ತ ।
ರಷ್ಟ್ಯಜನರಿಗಾಗಪ್ಪೊತ್ತಿನೊಳು । ಸುದ್ದಿ ।
ಮುಟ್ಟಲವರು ಪಟ್ಟದರಸನೊಳು । ಶರಣು ।
ಗೊಟ್ಟು ತುರಗ ಪಟ್ಟದಾನಿಗಳು ॥

ಬಲ ಮುತ್ತಲು ।
ಛತ್ರ ಯೆತ್ತಲು ।
ಪಾಲಿಕಿ ಹತ್ತಲು ॥ ಕೂಡಿ ।

ಹೊಂಟಿತು ಸವಳಗಟ್ಟಿಗಿಯು ಮುಂದ । ಪುಕ
ಬಿಟ್ಟರರಸುಮಕ್ಕಳಿಷ್ಟು ಚೆಂದ । ಪೇಳ ।
ಲೆಷ್ಟು ವರ್ಣಿಸಲಿವ । ರಷ್ಟೈಶ್ವರ್ಯದಿ ಬಂದು ।
ದಿಟ್ಟ ಸಾಹೆಬರಿಂದ । ರಿಟ್ಟು ನಿಲ್ಲುತಲಿ ॥ದುಂದುಮೆ॥

ವರ್ತಮಾನವನು ತಿಳಿದಾಗ ಸರದಾರರು ।
ಪುತ್ರರನು ನೋಡಿ ಮನ್ನಿಸುತೆ ॥

ಬಿಟ್ಟಗೊಡಲು ಹೂವಿನ ಹಾರೆ । ಕೊರಳೊಳು ।
ಮುಟ್ಟೆ ಹಾಕಲು ಮುತ್ತಿನ ಸರ ॥ ॥

೬೦

ಕುರಿಸಿ ಮೋಜಿನ ಮಣಿಯೊ । ಳರಸ ಪುತ್ರರನಾಗ ।
ಯಿರಿಸ್ಯವರ ಮಧುರ ಮಾತಿನಲಿ ॥

ಚದುರ ಮಕ್ಕಳ ನೋಡಿ । ಯಿದುರಿಲ್ಲ ಸಾಹೇಬ
ಹೆದರದಿರುವದೆಂದವರಿಗೆ ಪೇಳಿ । ನೀವು ।
ಬೆದರದೀ ದವಲತ್ತೆಲ್ಲವನು ಆಳಿ । ನಮ್ಮ ।
ನದರಾಣಿಡುತಿರುತುಲ್ಹಾಸ ತಾಳಿ ॥

ಎಂದು ನುಡಿಯುತೆ ।
ಭಯ ಬಿಡಿಸುತೆ ।
ಧೈರ್ಯಗೊಳಿಸುತೆ ॥ ಒಳ್ಳೇ ।

ಚದುರ ಸಿಪಾಯಿಗಳೊದಗಿ ಕೂಡಿ । ಆನಿ ।
ಕುದುರಿ ರಥವು ಪಲ್ಲಕ್ಕಿಗಳು ಗಾಡಿ । ಕಿತ್ತೂರ ।
ಸದರನಾಳುತೆ ಜನ । ನದರಿನೊಳಿರಿಸುತೆ ।
ಮಧುರನಾಡುತೆ ದಯ । ವೊದಗಿರುವದೆನುತೆ ॥ ದುಂದುಮೆ ॥

ಇರಿಸ್ಯವರ ಮಧುರ ಮಾತಿನಲಿ ಸರದಾರರು ।
ಸರಸದಲಿ ಒರೆದರರಸರಿಗೆ ॥

ಒಪ್ಪಿಕೊಂಡಿಹುದೆಂದು ಪೇಳಿ । ದೊರೆಗಳಿ ।
ಗಪ್ಪಣ್ಯಾಗಲು ಬಂದರ್ ತೆರಳಿ ॥

೬೧

ಕೇಳಿ ಕಿತ್ತೂರ್ ದೊರೆಗಳ್ । ತಾಳಿ ಸಂತೋಷವನು ।
ಮೇಳೈಸಿ ಹೊರಡಲರಸುಗಳು ॥

ಒರೆಯಲ್ಲುಕುಮವೆಲ್ಲ । ರರಿಯಲು ನಿಸ್ಪತ್ತ ।
ದೊರೆಯಲರಸು ರಥ ತುರಗಗಳು । ಫೌಜು ।
ಬೆರೆಯಲು ಡಂಕೆ ನಿಶಾನಿಗಳು । ಧ್ವನಿ ।
ಸುರಿಯಲಾ ಭೇರಿ ಮೃದಂಗಗಳು ॥

ಪಾತ್ರವಾಡಲು ।
ಸೂತ್ರಪಿಡಿಯಲು ।
ನೇತ್ರ ನೋಡಲು ॥ ಜನ ।

ನೆರೆಯಲಾ ಪಾಲಿಕಿ ಯೇರುತಲಿ । ದೊರಿ ।
ಕರೆಯಲೆಲ್ಲರು ಬಂದು ಕೂಡುತಲಿ । ದಾರಿ ।
ಸರಿಯಲು ಕಿತ್ತೂರು । ಬರಲರಮನೆಯೊಳ ।
ಚ್ಚರಿಯವಾಗಲು ಭಯ । ಜರೆಯಲವರಿಗೆ ॥ ದುಂ ॥

ಮೇಳೈಸಿ ಹೊರಡಲರಸುಗಳು ಪುರವನ್ನು ।
ಆಳಿದರು ಅಭಯಗಳ ಕೊಡುತ ॥

ಹದಿನಾಲ್ಕು ಕರ್ಯಾತಿ ನಾಡ । ಗಳಿಸುತ ।
ಪದುಳದಿಂದಿರುವರು ಪಾಡ ॥

೬೨

ಸಪ್ತ ವರುಷವು ರಾಜ್ಯ । ಗುಪ್ತದಲಿ ಆಳಿದರು ।
ಜಾಪ್ತಿ ಕುಂಪಣಿಯರ್ಹುಕುಮಿನಲಿ ॥

ಪ್ರೊಡವಿಪ  ಬಾಪುಸಾಹೆಬನೆಂಬನನು ಜನು ।
ನಡುವಿನ  ಮಗ ಬಾಬಾಸಾಹೇಬಗ । ರೋಗ ।
ಬಿಡದೆ ಸೇರಲು ಜ್ವರ ತಾಪವಾಗ । ಕೂಡಿ ।
ಬಡವಾಗಲಾ ದೇಹ ವ್ಯಾಡನೊಳಗ ॥

ಕೂಡಿ ಬೆರೆದನು ।
ತಾಯಿಯಾ ಮರೆದನು ।
ಮುಕ್ತಿಯರಿದನು ॥ ತಮ್ಮ ।

ಮಡಿದನೆಂಬುತೆ ತಾಯಿಯೊಡಗೂಡುತೆ । ದುಃಖ ।
ಕಡಲೊಳುರುಳಿ ಬಿದ್ದು  ತೇಲ್ಯಾಡುತೆ । ಚಿಂತೆ ।
ಬಡುತಿರುತಿರಲು ಬಾ । ಳಾಸಾಹೇಬನು ಶಿವ ।
ನೊಡನೆ ಕೂಡಲು ಚೆನ್ನವ್ವ । ನೊಡಲಪುತ್ರನು ॥ ಮಂ ॥

ಜಾಪ್ತಿ ಕುಂಪಣಿಯ ರ್ಹುಕುಮಿನಲಿ ನಡೆಯುವ ಮಗನ ।
ಅಪ್ಪಿದಳು ತಾಯಿ ಬಳಲುತಲಿ ॥

ಮುದ್ದು ಕೊಡುತೆ ಎನ್ನ ಪುತ್ರಾ । ಅಗಲಿದೆ । ಯೆಂ ।
ದೆದ್ದು ಬೀಳ್ವಳು ಮುಚ್ಚಿ ನೇತಾ ॥

೬೩

ಹಿಂಡು ಮಂದಿಯೊಳ್ ನಾನು । ರಂಡಿತನವನು ತೆಗೆದೆ ।
ಗಂಡನಿದಿರಿನೊಳು ಮಡಿಯುದಲೆ ॥

(೫೪)

ಮಗನೆ ನಿನ್ನಗಲಿ ನಾ । ನಗೆಗೇಡಾಗಿರಲಾರೆ ।
ಜಗದೊಳು ನಿನ್ನಂಥ ಸುಗುಣರಾರು ? । ಕಾಣೆ ।
ಮಿಗಿಲುಳ್ಳ ನಗಿಮುಖ ಸೊಗಸುದೋರು । ಹೊಟ್ಟಿ ।
ಬಗಿದುದಿಸಿರದೆ ನೀ ಪೋಗುವರೇ ? ॥

ಇಚ್ಛೆ ತೀರಿತು ।
ಎಚ್ಚರ್ತಾರಿತು ।
ಕಿಚ್ಚು ಸುರವಿತು ॥ ಒಡಲೊಳ್ ।

ಹಗಲಿರುಳು ತಗಬಗಿಗೊಳಿಸಿರಲ್ಯೋ । ಅಗ್ನಿ ।
ಬಗಿದು ಧುಮುಕಿ ಅದರೊಳು ಬೀಳಲ್ಯೋ । ಜೀವ ।
ಗಗನಕ್ಹಾರುವದ್ಯಾವ । ಬಗೆ ಮಾಡಲೆನುತಾಗ ।
ಸುಗುಣಿ ಚೆನ್ನವ್ವನು । ಮಗನನಪ್ಪಿದಳು ॥ ಮುಂಮು ಮೆ ॥

ಗಂಡನಿದಿರಿನೊಳು ಮಡಿಯುದಲೆ ಉಳಿದಿಲ್ಲಿ ।
ಭಂಡಾದೆ ಸರಿಯ ಸತಿಯರೊಳು ॥

ಕಣ್ಣೀರುದುರಿಸ್ಯಳುತಾಗ । ಮಗನೆನ್ನು ।
ಮಣ್ಣೊಳು ಮರೆ ಮಾಡ್ಯಾಳಾಗ ॥

೬೪

ಬಾಪುಸಾಹೆಬ ತಾಯಿಯಾ । ತಾಪ ಬಿಡಿಸುತೆ ಮನೆಯೊಳ್ ।
ಜೋಪನದಿ ಮಗನ ಮರೆಸುತಲಿ ॥

ಹಡದವ್ವ ಚಿಂತೆಯ । ಪಡುವರೆ । ದವಲತ್ತು ।
ಪಡೆತನವಾಳಿರು ಎನ್ನ ಒಡನಿರುತೆ ರಾಜ್ಯ ।
ನಡಿಸು ಸುಖದಿ ಹರುಷವ ಪಡುತೆ । ಪ್ರೀತಿ ।
ಮಿಡು ನಿಷ್ಪತ್ತರರೊಳು ಕೂಡಿರುತೆ ॥

ಶಾಂತಿ ತಳೆಸಿದ ।
ಭ್ರಾಂತಿ ಗಳೆಸಿದ
ಚಿಂತಿಯುಳಿಸಿದ ॥ ತಾಯಿಯಾ ।

ಆಡಿಗಟ್ಟಿಡಿದು ರಾಜ್ಯವಾಳಿದನು । ಮಾತು ।
ನಡಿಸಿಕೊಳುತೆ ಭಾರ ತಾಳಿದನು । ಸುಖ ।
ಬಡುತಿರುತಿರಲಾಗ । ಬಾಪೂಸಾಹೆಬಗೊಳ್ಳೆ ।
ಒಡಲೊಳು ಘನರೋಗ । ಪಿಡಿಯಲವನಿಗೆ ॥ ದುಂದುಮೆ

ಚೋಪನದಿ ಮಗನ ಮರೆಸಲು ಹಿರಿಯ ಮಗನ ।
ತಾಪ ನೋಡುತಲಿ ಬಳಲಿದಳು ॥

ಎರಡು ಮಕ್ಕಳು ಹೋದ ಚಿಂತಿ । ನಿನ್ನನು ನೋಡಿ
ಮರೆತಿದ್ದಿದೇನಾಯ್ತು ಭ್ರಾಂತಿ ॥

೬೫

ಕರಗಳನು ಹಿಡಿದ್ದಿಡಿದು । ಜ್ವರಗಳನು ನೋಡಿದಳು ।
ಸುರುಗಳಿವ ಮಗನ ಮುಖವನ್ನು ॥ ॥

ತರುಳರೆ ನಿಮಗೆಂಥ । ದುರುಳಿರ ಸೆರಗಿಂದೆ ।
ನೆರಳು ಸೊಂಕಿತು ನಮ್ಮ ಬಳಗದಲಿ । ಹಣೇ ।
ಬರಹ ಬರೆದ ಬ್ರಹ್ಮ ಲೋಕದಲಿ । ಮಕ್ಕ ।
ಳಿರಬಾರದೆಂತೆಂದು ಶೋಕದಲಿ ॥

ಮಗನ ನಪ್ಪುತೆ ।
ದುಖ್ಖ ವಪ್ಪುತೆ ।
ದಿಕ್ಕು ತಪ್ಪುತೆ ॥ ದೇಹ ।

ಸ್ಮರಣೆ ತಪ್ಪಲು ಜನ ನೆರೆದಿತೆಲ್ಲ । ಮುಂದೆ
ಮರಣಗತಿಯ ಚಿಹ್ನ ತೋರಿತಲ್ಲ । ಯೆಂದು ।
ಮರುಗಿದರ್ ನಿಶ್ಪತ್ತ ರರಸು ಮಕ್ಕಳ್ ಕಿತ್ತೂರ್ ।
ದೊರೆತನಳಿವುದೆಂದು ದೊರೆ ನೋಡ್ಯಳುವರು ॥ದುಂ॥

ಉಸುರುಗಳೆಯುವ ಮಗನ ಮುಖವನ್ನು ನೋಡುತಲಿ ।
ಅರಸಿ ಚೆನ್ನವ್ವ ಹೊರಳಿದಳು ॥

ಮಗನೆ ಬಾ ಮಾರಸುಂದರನೆ । ಮುದ್ದಿಸ ಮುಖ
ಹೊಗರುಳ್ಳ ಪೂರ್ಣಚಂದಿರನೆ ॥

೬೬

ದುಃಖ ಮಾಡಲು ದೊರೆಗೆ । ಬಿಕ್ಕು ಹತ್ತಿತು ಆಗ ।
ಮುಕ್ಕಣ್ಣ ಮುನಿಸಿದನೀ ಕಾಲದಲಿ ॥ ॥

ದೊರಿ ಮಲ್ಲಸರ್ಜನ । ಹಿರಿಯುಮಗನು ದೇಹ ।
ದರುವಿಲ್ಲದ್ಹೊರಳ್ಹೊರಳಿ ಬೀಳುತಲಿ । ಜೀವ ।
ಶರಿರವಗಲಿ ತಾನು ಬ್ಯಾರ್ಹಾರಲು । ಪೋಗಿ ।
ಯೆರಕಿ ನಂದದಿ ಶಿವನೊಳು ಸೇರಲು ॥

ಸ್ವರ್ಗವಾದಿತು ।
ಮಾರ್ಗದೊರದಿತು ।
ಭರ್ಗಗರಿದಿತು ॥ ತಾಯಿ ।

ಹರದಿ ಚೆನ್ನವ್ವ ಸೊಸ್ತೆರರಸಿಯರು । ತೊತ್ತು ।
ನೆರೆದರಗಣಿತ ಗುಮಾಸ್ತೆಯರು । ಕೂಲಿ ।
ಮರುಗುತೆ ಫಿಸ್ಪತ್ತರ್ । ಚಿರಗುಬಡುತೆ ನಿಂತು ।
ಮೊರಿ ನೋಡ್ಯಳುವರ್‍ಯಾವ । ಪರಿಮಾಡಲೆನುತ ॥ದುಂ॥

ಮುಕ್ಕಣ್ಣ ಮುನಿದನೀ ಕಾಲದಲಿ ಚೆನ್ನವ್ವನು ।
ತೆಕ್ಕಿಸ್ಯಳುತಿರಲು ಮಗನನ್ನು ॥

ಮುಂದೆನ್ನ ಗತಿಯೇನು ಪುತ್ರಾ । ತಲೆಯ ವ್ಯಾಲಿ ।
ಹಿಡಿಸಲ್ಯಾರಿಗೆ ಇನ್ನು ಛತ್ರಾ ॥

೬೭

ಮಡದಿ ವೀರವ್ವನು । ಒಡೆಯ ನಿದಿರೊಳ್ನಿಂತು ।
ಬಿಡಿವಳ್ಗಣಿ ನೆಲದೊಳುರುಳುತಲಿ ॥ ॥

ಪತಿಯೆ ಬಾ ಯೆನ್ನ ಸುರತಾಲಯದೊಳು ನೀನೆ ।
ರತಿಯೆ ಬಾ ಮಾರನ ಸುಂದರನೆ । ಈ ಸಂ ।
ಗತಿಯೆ ಬಾ ಕಳೆವರ ಚಂದಿರನೆ । ವಸು ।
ಮತಿ ವರ ಶುಭಕರ ಮಂದಿರನೆ ॥

ಎನ್ನ ನಲ್ಲನೆ !
ಗುಣ ಬಲ್ಲನೆ ।
ಎದೆ ಕಲ್ಲನೆ ॥ ಮಾಡಿ ।

ಮತಿಯಿಲ್ದೆನ್ನಗಲಿ ನೀ ಹರನೊಳಗೆ । ಪೋಗಿ ।
ಜತಿಗೂಡಿದರೆ ಮುಂದೆ ಸುರರೊಳಗೆ । ಮಾತು ।
ಮಥನಿಸುವರು ನಿನ್ನ । ಸತಿಯನಗಲಿದರ್ಯಾವ ।
ಗತಿಯ ಹುದೆನುತ್ತಿಂದಿನ । ಪಥವ ಹಿಡಿಸುವರು ॥ದುಂ॥

ಬಿಡಿವಳ್ಗಣಿ ನೆಲದೊಳುರುಳುತಲಿ ವೀರವ್ವನು ।
ಸುಡಲೆಂದಳೆನ್ನ ಜನ್ಮವನು ॥ ॥

ಬರಬಾರದ್ದೆಣ್ಣಾಗಿ ಹುಟ್ಟಿ ಪತಿ ನಿನ್ನ
ವಿರಹದಿಂದುರಿದಿತು ಹೊಟ್ಟಿ ॥

## ೭೮

ಕೀರ್ತ್ತಿ ರ ಪುರಕಿನ್ನು । ಮುತ್ತ್ಯಾರು ದೊರೆಯಾಗಿ ।
ಚಿತ್ರದ ಮಾಲಿನೊಳು ಕುಳಿತು ॥

ಒರೆಯಲಿನ್ನೇನು ನಾ । ಸರಿಗಿ ಚಿಂತಾಕ ಮುತ್ತ್ತು ।
ಮೆರೆವ ರ್ಯಾಗುಟಿ ಚೌರಿ ತಲೆಯೊಳಗೆ । ನೆಲ್ಲೀ ।
ಸರ ಪುತ್ತ್ತಳಿಯು ಮಾಲೆ ಕೊರಳೊಳಗೆ ॥ ಹಾರ ।
ವರ ರತ್ನ ಖಚಿತುಂಗುರ ಬೆರಳೊಳಗೆ ॥

ಬಂಗಾರ ಬಳಿಗಳು ।
ಶ್ರಿಂಗಾರ ಮಣಿಗಳು ।
ದ್ರವ್ಯ ಖಣಿಗಳು ॥ ಹರಿ ।

ಧ್ವಂಡೊಗೆವುತೆ ಗಂಡಗೊರಗಿದಳು । ನಿನ್ನ ।
ಸರಿ ದೊರೆಯಾರೆಂದು ಕರಗಿದಳು ಇನ್ನ್ಯಾವ ।
ಪರಿಯು ಮಾಡಲಿ ಮುಂದೆ । ಕೆರೆ ಭಾವಿ ಮುಳುಗಿ ೞ
ಲ್ಲಿರು ಪ್ರಾಣಿಗಾಹುತಿ ಯಾಗಲ್ಯಾ ಎನುತೆ ॥ಡುಂ॥

ಚಿತ್ರದ ಮಾಲೆನೊಳು ಕುರಿತು ಆಳುವರು ।
ಗೊತ್ತಿಲ್ಲದಾಯ್ತಿ ನಗರದೊಳು ॥ ॥

ಆನೆ ಕುದುರೆ ರಥ ದಂಡು । ಪಾಲಿಕಿ
ಕೂನಿಲ್ಲದಾಗ್ಸ್ವದು ಬಂಡು ॥

## ೭೯

ಎಷ್ಟು ವರ್ಣಿಸಲಿ ನಾ । ಅಷ್ಟೈಶ್ವರ್ಯವನೀಗ ।
ಬಿಟ್ಟು ಹೋಗುವರರಸರೀಗೆನ್ನ ॥ ॥

ಪೇಳಲಿನ್ನೇನವ್ವ ಗೆಳತಿಗಳಿರ್‍ಯ್ಯಾ ಪ್ರಾಣ ।
ವುಳಿಯದೆನ್ನಯ ಕಾಂತನಗಲಲಾರೆ । ದೊರೆಯ ।
ಸುಳಿವುಗಾಣದೆ ನಾನು ಬಾಳಲಾರೆ । ಚಂದ್ರ ।
ಕಳೆಯುಳ್ಳ ರಾಜನ ನೋಡಲಾರೆ ॥

ವ್ಯಾಳೆಗಳೆವುದು ।
ಗಳಿ ಗ್ಯ್ಯಾಳಿಯದು ।
ಪ್ರಾಣವಳಿವುದು ॥ ಇಲ್ಲಿ ॥

ಬಳಿಯೊಳೆಲ್ಲರು ಬಂದು ಕೂಡಿರೆವ್ವ । ಯೆನ್ನ ।
ಕುಳಿಯೊಳ್ ಹೂಳಿಸಿ ಹೋಗಿ ಬಾಳಿರೆವ್ವ । ಇಳೆ ।
ಯಾಳುವ ರಾಜರ । ನಳಿದುಳಿದರೆ ನನ್ನ ।
ಬಾಳ್ವೆಗಧಿಕಾರಿಗಳಾ । ಗ್ಯಾಳ್ವರಾರೆನುತ ॥ ದುಂ ॥

ಹೋಗುವ ರರಸರೀಗೆನ್ನ ಕಿತ್ತೂರ ।
ಪತಿಯು ಯೆಂದಳಲಿದಳು ॥

ಕರಿಮಣಿ ಕಾಜಿನ ಬಳೆಯು । ಒಡೆಯುತೆ
ಸರದಾಳಿ ಪದಕಗಳ್ಹರಿಯೆ ॥

## ೭೦

ಟಾಪು ಸಾಹೇಬನ । ರೂಪಡಗೆ ಭೂಮಿಯೊಳು ।
ತಾಪಡರಿ ದುಃಖ ಬಳಗದೊಳು ॥

ಸುಂದರರಾದ ವೂರೂ । ವುಂದಿ ಮಕ್ಕಳು ಪೋದ ।
ರೆಂದು ಚಿಂತಿಸಿ ಬಂದು ಬಳಗವೆಲ್ಲ । ಅತ್ತೆ ।
ಬಂದು ಸೊಸ್ತೆರನ ಸಮಿಸಿರುವಳಲ್ಲ । ಶೋಕ ।
ಕಂದುಗೊರಳನಾದ ಶಿವನೆಬಲ್ಲ ॥

ದಿವಾನರು ಬಂದು ।
ನಿಸ್ಪತ್ತರರಂದು ।
ವಪ್ತದಾರ್ರ್ ತಂದು ॥ ಲೆಕ್ಕಾ ।

ಹೊಂದಿಸಿದರು ಬೆಳ್ಳಿ ಬಂಗಾರವ । ಫೌಜು
ಬಂದೂಕ ತುರಗಾನಿ ಶ್ರಿಂಗಾರಹ । ಚೆಂದಾ ।
ಚೆಂದ ಜೀನಸುಗಳ । ಹೊಂದಿಸಿಡುತೆ ಅರ ।
ಮಂದಿರದೊಳಗೆ ಕಿ ।ಷ್ಕಿಂಧದಿ ಜನರು ॥ ದುಂದುಸಿ ॥

ತಾಪಡರಿ ಮುಂಖ ಬಳಗದೊಳು ಸಮಿಸುತಲಿ ।
ಭೂಪತಿಯುಳಿನುತೆ ನಮಿಸಿದರು ॥

ಮಾರ್ಬಲ ಚತುರಂಗ ಬರಲು । ಚೆನ್ನವ್ವಸು ।
ಕಾಭಾರ್ರಗಳ ಮಾಡುತಿರಲು ॥

೬೧

ಎಲ್ಲ ಜನ ಪೊಲಿಸು ತಲಿ । ಬಲ್ಲಿದಳು ದವಲತವ ।
ಸಿಲ್ಲದಾಳಿದಳು ನೀತಿಯುಲಿ ॥ ॥

ವಸುಧಿಯೊಳಗೆ ಮಿಗಿ । ಲೆಸೆವುತಾಳಲು ರಾಜ್ಯ ।
ರಸಿಕಳೆಂದೆನಿಸುತೆ ಪಸರಿಸಲು । ಅತ್ತಿ ।
ಸೂಸೆಗೆ ಬೇಸರದಿ ಕದನ ಬರಲು । ಮುಂದೆ ।
ಎಸಗಲ್ ವೈರವು ನಿಸ್ಪತ್ತರು ಕೇಳಲು ॥

ಅತ್ತಿ ಒಲವನು ।
ಮತ್ತೆ ಕಲಹನು ।
ಎತ್ತಿ ಛಲವನು ॥ ಮಾಡಿ ।

ಮುಸಲತ್ತಿಸಗಿ ಜನ ಸೊಸಿಕಡೆಗೆ । ನೆರೆ ।
ಮುಸುರಿ ವಂದಿಸಿ ಮುಖಹಸಿತರಾಗಿ । ಮೊಕ ।
ವೆಸೆಯುಳ್ಳವರು ಕೂಡಿ । ಹಸಗೆಡಿಸುತೆ ಅತ್ತಿ ।
ಸೊಸದೆರಗಲುವುದ್ಯೋ । ಗಿಸಿದರಾಕ್ಷಣದಿ ॥ ದುಂ ॥

ಸಿಲ್ಲಪಾಂ ದಳು ನೀತಿಯುಲಿ ಚೆನ್ನವ್ವನು ।
ಎಲ್ಲರನು ಕರೆಸಿ ಪೇಳಿದಳು ॥ ॥

ಚೆಂದಾಗಿರುವ ದವಲತ್ತು । ಕೊರತೆಯು ।
ಹೊಂದುವದೀ ಮುಸಲತ್ತು ॥

೭೨

ಪ್ರಣ್ಯತೀರದ ಮೇಲೆ । ತಣ್ಣಗಿರದಲೆ ಲೋಕ ।
ವಣ್ಣಗಳು ಕೂಡಿ ಮಾಡಿದರು ॥

ಮಕ್ಕಳೆಲ್ಲರು ಹೋದ । ಪಕ್ಕಾ ಸುದ್ದಿಯು ತಿಳಿ ।
ವಕ್ಕರದಲಿ ಬಂದು ಕೂಡಿದರು । ಕಿತ್ತೂರ್ ।
ಬೊಕ್ಕಸದೊಳು ಪ್ರವ್ಯ ನೋಡಿದರು । ಇಷ್ಟು ।
ವಕ್ಕಿಸಿ ಕೊಳ್ಳುವ ಮಾತನಾಡಿದರು ॥

ಕುಂಪಣಿಯರಾಗ ।
ಕೆಂಪು ಮೋರಿಗ ।
ಜಂಪು ತೋರ್‍ಯಾಗ ॥ ಸರದಾರ್ ।

ಹೊಕ್ಕರಾ ಕಿತ್ತೂರ ಸೀಮಿಯುಲಿ । ಸೋಲ್ಜ ।
ರೆಕ್ಕರದಲಿ ಬಂದು ನೆದೆಯುತಲಿ । ಫೌಜು ।
ಲೆಕ್ಕವಿಲ್ಲದೆ ಮದ್ದು ಗುಂಡು ತೋಫವು ಕಣ್ಣ ।
ಕುಕ್ಕುವ ಕರಮೂಲಿ ಬಂದೂಕದವರು ॥ ದುಂ ॥

ಅಣ್ಣಗಳ ಕೂಡಿಮಾಡಿದರು ಸಾಹೇಬರು ।
ಬಣ್ಣಿಸುತ ಫೀತುರಿ ನಡಿಸುತಲಿ ॥

ಮುನಿಸಿ ದಪ್ತರ ಗುಮಾಸ್ತಿಯರು । ಬರೆಬರೆ ।
ದನಿತನ್ನು ಹುಕುಮ ನಡಿಸುವರು ॥

೭೩

ಕುರಿಸಿ ಮೇಜಿನ ಮಣಿಯೊಳ್ । ಸರಸದಲಿ ಸರದಾರರು ।
ತರತರದಿ ಬರೆವ ಹುಕುಮುಗಳು ॥ ॥

ಒರೆದರಾ ಕಿತ್ತೂರ । ಪುರದ ಕಾರ್ಕುನರನ್ನು ।
ಕರೆದು ಪೇಳಿದರ್ ನಿಮ್ಮ ದೊರಿಸಾನಿಗೆ । ಪೇಳಿ ।
ರರಸುತನವಳಿದಿರುವದೆಂದಾಕೆಗೆ । ದ್ರವ್ಯ ।
ಸುರಿಸಿ ಚಾಕರರಾಗುವೆವು ನಾವೀಗ ॥

ತಾನು ಸ್ವಸ್ಥಾಗಿ ।
ರಾಜ್ಯ ಸಿಸ್ತಾಗಿ ।
ಆಳಿ ಗೊತ್ತಾಗಿ ॥ ಇದ್ದ ।

ರರಸಿ ಚೆನ್ನವ್ವಗ ನಡಿಸುವೆವು । ತನ್ನ ।
ಕಾರಭಾರದಿ ಸುಖ ಬಡಿಸುವೆವು । ಯೆಂದು ।
ಬರೆದ ಮಾತನು ಕೇಳಿ । ಕಾರಕೂನನು ಪೋಗಿ ।
ಅರಸಿ ಚೆನ್ನವ್ವಗ । ಅರುಹಿದನೀ ನುಡಿಯ ॥ ದಂ ॥

ತರತರದಿ ಬರೆವ ಹುಕುಮುಗಳ ನೋಡಿದೆನು ।
ಹೊರೆಯಲ್ಲಿಂತಾ ಸರಕಾರರಿಯೆನೆಂದು ॥

ಇಂಗ್ರಜರು ಸಾಧಿಸಿಕೊಳುತ । ರಾಜ್ಯವ ।
ಸಂಗ್ರಹಿಸಿದರು ಲೋಕದ್ರೋಹರತ ॥

## ೭೪

ಕರಿಸಿದಳು ನಿಸ್ಪತ್ತ । ದೊರಿ ಮಕ್ಕಳೆಂಬವರಿ ।
ಗೊರೆದಳಿಂಗ್ರಜರ ಪರಿಯನ್ನು ॥ ॥

ನೆರೆದವರು ಶಿಲೇದಾರ್ರು । ವರಪುತ್ರ ನಿಸ್ಪತ್ತ ।
ದೊರಿ ನಾಯಕರು ದಪ್ತರ್ ಮುನಸಿಯರು । ಅವರಾದಿ ।
ವೀರಪ್ಪ ಸರದಾರ ಮನೆಯವರು । ದಳ ।
ನೆರಿಯಲು ಸವಳಗಟ್ಟಿಗಿಯವರು ॥

ಕೂಡಿ ನೆರೆಯಲು ।
ಚೆನ್ನವ್ವೊರೆಯಲು ।
ಸರ್ವರರಿಯಲು ॥ ಇಂಗ್ರ ।

ಜರ ಮಾತು ಮನಸಿನೊಳ್ ತಾರದಲೆ । ಪರಿ ।
ಪರಿಯಿಂಗ್ಹೇಳಿದುವೆಲ್ಲ ಸೇರವಲೆ । ಕೂಡಿ ।
ಬರೆದರವರಿಗಿಲ್ಲಿ । ಬರಬಾರದೆನುತ್ತಿಂಗ ।
ತಿರುಗಿ ಪೋಗ್ವುದು ನೀವಿ । ನ್ನಿರದೀ ಸೀಮೆಯೊಳು ॥ ದುಂ ॥

ಬರೆದಳಿಂಗ್ರಜರ ಪರಿಯನ್ನು ನಾಡೊಳಗೆ ।
ತರವಲ್ಲಿದೆಂದುತ್ತ್ರ ಕಳುಹಿದಳು ॥

ಭಾವಣಿ ತೆಗೀರೆಂದು ಉತ್ರಾ । ಪೇಳುತಲೋರ್ವ ।
ಹವಣಿಸಿ ಕೊಡಲಾಗ ಪತ್ರಾ ॥

## ೭೫

ಆ ಪತ್ರ ನೋಡುತಲಿ । ತಾಪದರಿ ಸರದಾರರು ।
ಕೋಪದಲಿ ಸೋಜರನು ಕರೆದು ॥

ಬಂದರಾ ಪುರ ಸುತ್ತ । ಬಂದೂಕ ತೋಪಿನ ।
ಮಂದಿ ಸಾಹೆಬ ಜನ ಹೊಂದಿಹರು । ಹಿಂದೆ ।
ಮುಂದೆ ಬಾರಿನ ಜನ ತಂದಿಹರು । ಈ ಬಾ ।
ಚೆಂದು ತೋಪುಗಳ್ಹೂಡಿ ನಿಂದಿಹರು ॥

ಕೀಲೇದ್ದಿಂದ್ದಿಂದ ।
ಫೌಜು ಬಂದ ಬಂದ ।
ಬಲು ಚೆಂದ ಚೆಂದ ॥ ಸೋಲ್ಜ ।

ರ್ಹೊಂದಿ ತೋಪಿನ ಗಾಡಿ ಸರಳ್‌ಮಾಡಲು । ನೋಡಿ
ಬಂದೂಕದೊಳು ನೀಟ ಬೆರಳ್ ತೀಡಲು । ತಂಬು
ದುಂದುಭಿ ಭೇರಿ ಭೋ । ರೆಂದ ಧ್ವನಿಯು ರಾಜ ।
ಮಂದಿರದೊಳು ಜನ । ಬಂದು ಕೂಡಿದರು ॥ದುಂ॥

ಕೋಪದಲಿ ಸೋಜನರು ಕರೆದು ಪೇಳಿದರು ।
ಕಪಟ ರೀತಿಯನು ತಿಳಿವುತಲಿ ॥

ಕಿತ್ತೂರ ಗಡಿ ಕಿಲ್ಲೇದೊಳಗೆ । ಬಂದ್ ಬಂದು ।
ಮುತ್ತಿತು ದಳ ಭಟರೊಳಗೆ ॥

೭೬

ಅಳವಾರಿಯ ಮ್ಯಾಲೆ । ಬಾಳ ತೋಪುಗಳ್ಹೇರಿ ।
ಸಾಲ್ಹಿಡಿದು ಬಂದುಕದ ಜನರು ॥

ತಂಡತಂಡದಿ ಮದ್ದು । ಗುಂಡು ರೋಹಿಲಿ ಗಾಡಿ ।
ಪೆಂಡಾರಿ ರಾಹುತ ಜನಗಳಾಗ । ತೋಫು ।
ಗುಂಡು ಬಂದುಕ ಪಿಸ್ತೂಲೆದೆಯೊಳಗ । ಹೇರಿ ।
ಕೊಂಡು ನಿಂತಿಹರಾಗ ಭಟರೊಳಗ ॥

ಕೋ೯ರಿ ವಿಾಸಿಯು ।
ರಣಕೇ೯ಶಿಯು ।
ಸುರಗಿ ರಾಸಿಯು ॥ ಹಿಡ ।

ಕೊಂಡು ಭಯದಿ ಹಿಂಡುಗಟ್ಟುತಲಿ । ಯುದ್ಧ ।
ಝುಂಡೆ ಪರಾರಿಗಳ ಕಟ್ಟುತಲಿ । ಕುಂಪಣಿ ।
ಕಂಡದಂಥವರಿದ । ಕಂಡು ಇವರು ಎಂಥಾ ।
ಪುಂಡರೆನುತೆ ತಮ್ಮ । ದಂಡು ಎಬ್ಬಿಸುತೆ ॥ ದುಂ ॥

ಸಾಲ್ವಿಡಿದು ಬಂದುಕದ ಜನರ ನಿಲ್ಲಿಸುತೆ ।
ಕಾಲು ಮುಂದಿಡುತೆ ಹೊಡೆಯುತಲಿ ॥

ಮದ್ದಿನ ಹೊಗೆ ಮುಸುಕುತಲಿ । ಕೆಮ್ಮಣ್ಣ ಮಡ್ಡಿ
ಜಿದ್ದಿನವರರೊಡಿದರು ಬಳಲಿ ॥

೭೭

ಗಡದ ಮ್ಯಾಲ್ಪೋ೯ಗಿ ತ । ಮ್ಮೊಡೆಯಳಪ್ಪಣೆಗೊಂಡು ।
ತಡೆಯದಲೆ ಗುಂಡು ಹೊಡೆಯುತಲೆ ॥ ॥

ತರತರದಲಿ ಕುಂಪಣಿ ಸರದಾರ ಸೋ೯ಜರು ।
ಸರಿಯದೆ ಕರವೂಲಿ ಒರೆಗಳನು । ಕೈಲೆ ।
ಹಿರಿಹಿರಿದೊಗಿ ತೋ೯ಫು ತರಗಳನು । ಮಾಡಿ
ಸರರೆಂಬ ಧ್ವನಿಗೂಡಿ ಶರಗಳನು ॥

ಬಾರಬಿಡುವರು ।
ಯೇ೯ರಿ ಕಡಿವರು ।
ಮುಂದೆ ನಡೆವರು ॥ ನೋ೯ಡಿ ।

ಕರಕರ್ಥಲ್ಗುಗಳ್ ಮಸಿದ್ದೊಡೆಯುತಲಿ । ತೋಫು ।
ತಿರುತಿರುವುತೆ ಮದ್ದು ಜಡೆಯುತಲಿ । ಪರಿ ।
ಪರಿಯಿಂದೆ ತೋಪ್ಹುರಲ್ । ಸುರಿದವು ಗುಂಡುಗಳ್ ।
ಅರಮನೆಯ ಪರಿವಾರ । ಬೆರಗಾಗುವಂತೆ ॥ ದುಂದುಮೆ ॥

ತಡೆಯುದಲೆ ಗುಂಡು ಹೊಡೆಯುತಲಿ ಒಳಗಿರುವ ।
ಗಡಕಿಲ್ಲೆ ಜನರು ನಡುಗುತಲಿ ॥

ಚಂಡಿನಾಟದ ಪರಿಯಂತೆ । ತೋಫಿನ
ಗ ಂಡುಗಳು ಬರುತಿಹವಂತೆ ॥

೭೮

ಬುರಜು ಮ್ಯಾಲಾಳವೇರಿಯ ಸುತ್ತ ತೋಫುಗಳು ।
ಹಾರಿದವು ಇಂಗ್ರಜರ ಬಲವ ।

ಸಿಕ್ಕಿತು ಎಡಬಲ । ದಿಕ್ಕಿಲ್ಲ ಸರದಾರು ।
ಲೆಕ್ಕಿಲ್ಲ ಸೋಜರು ಮಡಿಯುತಲಿ । ಮತ್ತ ।
ಚೊಕ್ಕ ತೋಫಿನ ಗುಂಡು ಬರುವುತಲಿ । ಸೋಜರು ।
ಬಿಕ್ಕಿ ಬಿಕ್ಕುತೆ ಪ್ರಾಣಾ ಬಿಡುವುತಲಿ ॥

ಗಾಬರಿಗೊಂಡು ।
ಮುಳುಗಿತು ದಂಡು ।
ಸರದಾರರಹಿಂಡು ॥ ನೆಲ ।

ಕಕ್ಕುತೆ ಬೀಳಲು ರಣದೊಳಗೆ । ಹದ್ದು ।
ಹಕ್ಕಿಯಾಡಲು ಕುಂಪಣಿ ಹೆಣದೊಳಗೆ । ಈ ಕಾ ।
ಲಕ್ಕೆದೆಯೊಳು ಗುಂಡು । ಹೊಕ್ಕುಳಿಯದೆ ರಕ್ತ ।
ಕಿಕ್ಕಿರಿಯುತೆ ಸುರಿ । ಯುತ್ತಿರೆ ಧರೆಗೆ ॥ ದುಂದುಮೆ ॥

ಹಾರಿದವು ಇಂಗ್ರಜರ ಬಲವು ಮುರಿದಾಗ ।
ಹಾರಿವರು ರಣದೊಳುಳಿಯದಲೆ ॥

ಮುಂಬಾಯಿಯೊಳು ಸುದ್ದಿ ತಿಳಿದು । ಫೌಜಿಗೆ ।
ತಂಬೂ ಮಾಡಲು ಕೋಪ ತಳೆದು ॥

೭೯

ಗಳಿಗೆ ತಡೆಯದೆ ಬಂದು । ಬೆಳಗಾಂವಿಗಿಳಿಯುತಲಿ ।
ತಳಬೇತು ತರಿಸಿ ನಡೆಯುತಲಿ ॥ ॥

ಎತ್ತ ನೋಡಲು ದಾರಿ । ಸುತ್ತ ಮುಚ್ಚಲು ದಳ ।
ಒತ್ತರ್ ಬರುವ ಮದ್ದು ಗುಂಡುಗಳು । ಹೋಗಿ ।
ಕಿತ್ತೂರ ಸೀಮೆಗೆ ದಂಡುಗಳು ಇಳಿ ।
ಯುತ್ತೇರಿಸಲು ರಣಝಂಡೆಗಳು ॥

ಡೇರೆ ಹೊಡೆಯಲು ।
ಪಾರೆ ಮಾಡಲು ।
ದಲ ಕೂಡಲು ॥ ಕಿಲ್ಲೇದ ।

ಸುತ್ತ ಸೋಜರು ಬಂದು ಮುತ್ತುತಲಿ । ಹೊಡೆ ।
ಯುತ್ತ ತೊಫುಗಳ್ಹೂಡಿ ಒತ್ತುತಲಿ । ಗಾಡಿ ।
ಯೆತ್ತಿತ್ತಿ ಕಡಿಯಲು । ಕತ್ತಿಯಾಟಿಗಳಿಂದೆ ।
ಕೊತ್ತಲುದುರಿ ತೋಫಿನೊತ್ತರವಾಗಿ ॥ ದುಂ ॥

ತಳಬೇತು ತರಿಸಿ ನಡೆಯುತಲಿ ಅರಮನೆಯ ।
ಒಳಗೆ ಪಿತುರಿಗಳ ನಡೆಸುತಲಿ ॥

ಏರೇರಿ ಹೊಡೆಯಲು ತೋಫು । ಪಟಾಲಂಬು ।
ಭಾರ ಮಾಡಲು ಒಂದೇ ಕೇಪು ॥

೮೦

ಸಿಡಿಲೆರಗಿದಂತೊಳಗೆ । ಬಡಿಯಲದ ಕಾಣುತಲಿ ।
ಜಡಿದರಿಂಗ್ರಜರು ಬಲವೇರಿ ॥ ॥

ಅರಮನೆಯೊಳು ಗುಂಡು । ಸುರಿಯಲು ಜನ ಬಾಯಿ ।
ತೆರೆದು ನೆಲದೊಳಾಗ ಉರುಳುತಲಿ । ಹೊಟ್ಟೆ ।
ಕರುಳುದೆಗೆಯಲಾಗ ನೆರಳುತಲಿ । ದಳ ।
ಹುರಪಳಿಸಲು ಬಿದ್ದು ಒರಲುತಲಿ ॥

ದಂಡು ಮುರಿಯಲು ।
ಬಂಡು ಆಗಲು ।
ಕಂಡು ಓಡಲು ॥ ಸೋಜ ।

ಕೇರಿ ಬರಲು ಅರಮನೆಯೊಳಗೆ ॥ ಕಂಡು ।
ಸರದಾರ್ಹಿಂದಕೆ ಸರಿಸದರೊಳಗೆ । ಇದ್ದ ।
ಅರಸಿ ಚೆನ್ನವ್ವ ಸೊಸ್ತೆರ ಕರೆದೊರೆಯ್ಯಲಾ ।
ಹಿರಿಯ ಸರದಾರಂಜದಿರಿಯೆಂದು ಪೇಳಿ ॥ ದಾಂ ॥

ಜಡಿದರಿಂಗ್ರಜರು ಬಲವೇರಿಸಿದರೆಂದು ।
ಒಡೆಯಳೇ ಭಯವ ಪಿಡಿಯುವರೇ ॥

ಪರಿಪರಿಯಿಂದೆ ಸಾಹೆಬರು । ಚೆನ್ನವ್ವಗ ।
ಒರೆಯೊರೆಯುತೆ ಸಮಿಸಿದರು ॥

೮೧

ಹೆದರದಿರಿ ಕದನ ನಡಿಸಿದೆವೆಂದು ಸರಪಾರರು ।
ಷೆಧುರದಲಿ ಒರೆದರವರಿಗೆ ॥ ॥

ಅರಮನೆಯೊಳಗಿರುವ ಸರಮುತ್ತು ಚಿಂತಾಕಾ ।
ಭರಣವ ದ್ರವ್ಯದ ಹಣಗಳನು ರತ್ನ ।
ತರತರದಲಿ ತತ್ತಿ ಸೊರಗಳನು । ಪೀತಾಂ ।
ಬರ ಜರತಾರಿ ವುಡುಗರೆಗಳನು ॥

ಹರಳಿನುಂಗುರ ।
ಚೆಲ್ವ ಬಂಗಾರ ।
ಒಳ್ಳೇ ಶ್ರೀಂಗಾರ । ವಾದ ।

ತುರಗಾನಿ ಬುರಿಕಿ ಪಲ್ಲಕ್ಕಿಗಳು । ವಾಲೀ ।
ಕಾರ್ ಶಿಪಾಯ್ಗಳು ಕುಂಪಣಿ ಬಾರಗಳು । ಪರಿ ।
ಪರಿ ಸರಂಜಾಮು ಕೊಟ್ಟು ಹೊರಡಿಸಿದರು ಹೊಂಗ ।
ಲರಮನೆಯೊಳಿರು ಎಂದು । ಸರಸದಿ ಪೇಳಿ ॥ ದುಂ ॥

ತುಧುರದಲಿ ಒರೆದವರಿಗೆ ಸರದಾರರು ।
ಬರುವರದ ಕೇಳಿ ಹೊಂಗಲದಿ ॥ ॥

ಅತ್ತಿ ಸೊಸೆಯರುಂಾಗ ಬಂದು । ಮನೆಯೊಳು ।
ಜತ್ತಿಲಿರುವರು ದುಃಖದಿಂದ ॥

ಲವಿ

ಕಿತ್ತೂರರಮನಿ-ಬದುಕು । ಮುತ್ತಿ ಹೇರಿದರಾಗ ।
ಒತ್ತರದಿ ಬೆಳಗಾಂವಿಯು ಸ್ಥಳಕ ॥

ಒರೆಯಲಿನ್ನೆಷ್ಟು ನಾ । ದೊರಿ ಮಲ್ಲೇಂದ್ರನ ದ್ರವ್ಯ ।
ಸರಿಯಿಲ್ಲೀತನ ಸಂಪತ್ತರಸರೊಳು । ಜವ ।
ದರಖಾನಿ ವರ ಹಣ ಮೊಹರುಗಳು । ಮುತ್ತು ।
ಸರ ವಜ್ರ ರತ್ನದ ಹಾರಗಳು ॥

ನಾರಿಯರ ವಸ್ತ ।
ಇರುವವು ಮಸ್ತ ।
ದೊರೆದವು ಸಿಸ್ತ ॥ ತರ ।

ತರ ತೊಂದಿಸಿರು ಬಂಗಾರ್ ಗಟ್ಟಿಗಳು । ಮುತ್ತು ।
ಸರಗೊಳಿಸಿರು ಚಿಂತಾ ಪಟ್ಟಿಗಳು । ನೆಲ್ಲೀ ।
ಸರ ಪುತ್ಥಳಿಯು ಬಂಗಾರ್ । ಬಳಿ ವಂಕಿ ಬಾಜೂಬಂ ।
ದ್ಧರಡೆ ಸರಿಗಿ ತೋಡೆ । ವರ ಪದಕಗಳು ॥ ದುಂ ॥

ಒತ್ತರದಿ ಬೆಳಗಾಂವಿಯು ಸ್ಥಳಕೆ ದೊರೆಯು ಸಂ ।
ಪತ್ತುಳಿಯದ್ದೇರಿ ಕಳುವಿದರು ॥ ॥

ತುರಗಾನಿ ಒಂಟಿ ಗಾಡಿಗಳು । ತುಂಬಲು ಪುತ್ತೆ ।
ತೀರದುಳಿದವು ಸಾಮಾನುಗಳು ॥

ಲಕ್ಷಿ

ಇಂಗ್ರಜರೀ ಸಂಪತ್ತು । ತಿಂಗಳದಿ ಒಯ್ದಾರು ।
ಶ್ರಿಂಗಾರದ ಜೀನಸುಗಳನ್ನು ॥

ಸೀರಿಗಳ್ ಜರತಾರಿ । ಸರಹೂವು ಸ್ಯಾವಂತಿ
ಸುರತಿ ಹಳದಿ ಕೆಂಪು ಹಮುರುಗಳು । ರೇಶ್ಮಿ ।
ಕಿರಮುಂಜಿ ಕುತನಿ ಅಂಜೂರಿಗಳು । ಭರ್ಜ ।
ರಿರುವ ಮುದರಿ ಚಾದರ ಶಾಲಗಳು ॥

ಅಂದಳಾನಿಯು ।
ಮುಂದಿ ಮೇಣೆಯು ।
ಚೆಂದ ಕುದುರಿಯು ॥ ಮೋರ್ಚ್ಯಾ ।

ಲ್ಹಾರಿಸುವ ಛತ್ರಿಪತ್ರಿಗೇರಿಗಳು । ಕಾಳಿ ।
ಬೀರುವ ಡಂಕೆ ನಿಶಾನಿಗಳು । ಒಳ್ಳೇ ।
ತಾರೀಪ ರಣಬಾಜಿ । ನೌಬತ್ತು ಡಣಲೆಂಬಿ ।
ಸ್ತರವೆಲ್ಲ ಸುಳಿಯದ್ದೇರಲು ಗಾಡಿಗಳನು ॥ ದುಂದುಮೆ ॥

ಶೃಂಗಾರದ ಜೀನಕುಗಳನ್ನು ರಥದ ತು ।
ರಂಗಪೊಡನೊಯ್ದುರ‍್ಥಗಲಿರುಳು ॥ ॥

ರಾಶಿರಾಶಿ ದ್ರವ್ಯಸಾಗಿ । ಪ್ರೋಗಲು ।
ದೇಶದೇಶವು ಬೆರಗಾಗಿ ॥

ಳಳ

ಅರಮನೆಯೊಳಿರು ಬದುಕು । ತೆರವು ಮಾಡುತೆ ಸೋಜ
ರರನು ಕಾವಲವ ಮಾಡುತಲಿ ॥ ॥

ಸಿಕ್ಕಿರುವ ಜನಕಾಗ । ಲೆಕ್ಕವಿಡಿದು ಬೇಡಿ ।
ಬಕ್ಕನೆ ಕಾಲಿನೊಳ್ ಹಾಕುತಲಿ । ನದ ।
ರಿಕ್ಕುತೆ ಪಾರೆದೊಳ್ ತರುವುತಲಿ । ಥಾರ್‍ಹ್ಮಿ ।
ಡಕೊಳ್ಕಯ್ದು ಬಂದಿನೊಳಿರಿಸುತಲಿ ॥

ತಿರುಗಲು ದಂಡು ।
ಹೊಂಗಲವ ಕಂಡು ।
ಸರದಾರರ ಹಿಂಡು ॥ ಕೂಡಿ ।

ದುಪ್ಪಿಸುವ ಚೆನ್ನವ್ವ ಗಕ್ಕರದಿ । ಪೇಳಿ ।
ಸೌಖ್ಯದಿಂದಿರಿಸಿದರ್ ಮಂದಿರದಿ । ಸುತ್ತು ।
ಸೊಕ್ಕಿದರಬರ ಕಾವ । ಲಿಕ್ಕಿ ಕುದುರಿ ಮಂದಿ ।
ಶಕ್ಕಪ್ಪಿಡಲು ಫೌಜು । ಮಿಕ್ಕಾದ್ದೊಯ್ಯುತಲಿ ॥ ದುಂ ॥

ಸೋಜರರ ಕಾವಲವ ಮಾಡಿ ಕಿತ್ತೂರ |
ರಾಜ್ಯವಂ ಪಾಲಿಸ್ಯಾಳುತಲಿ ॥ ॥

ತಾಲೂಕ ಮಾಹಲುಗಳ ಮಾಡಿ | ಕಚೇರಿಯೊಳ್ |
ಮಾಲ್ಕರ‍್ಯಾರ ಮುಲ್ದಾರರು ಕೂಡಿ ॥

೮೫

ಹೊಂಗಲದ ಪುರದೊಳಗ | ಸಂಗತಿಯತ್ತಿಯು ಸೊಸಿಯು |
ಲಿಂಗಜಾರಿಯನು ಭಜಿಸುತಲಿ ॥ ॥

ಮುರೆರಡೊರುಷವು | ಅರಮನೆಯೊಳು ಸೊಸೆ |
ಯರ ಕೂಡಿ ಮನದೊಳು ಮರುಗುತಲಿ | ಪತಿ |
ದೊರಿ ಮಲ್ಲಸರ್ಜನ ನೆನೆಯುತಲಿ | ಕಿತ್ತೂ |
ರರಮನಿ ದವಲತ್ತುಗಳೆವುತಲಿ ॥

ದುಃಖಿಸಿರುವುಲೆ |
ಮಕ್ಕಳ ಮರೆವುತೆ |
ತೆಕ್ಕಿಸ್ಯಳುವುತೆ ॥ ಇಷ್ಟು |

ಮರಗ ನೋಡಲು ರಾಯಣ್ಣೆಂಬವನು | ತಾಯಿಾ |
ಚರಣಕೆರಗಿ ಹಲ್ಲು ತಿಂಬುವನು | ಕುಂಪಣಿ |
ಸರದಾರೆಲ್ಲರ ಶಿರ | ಕೊರೆಯದಿರ್ದರೆ ನಾನು |
ಕುರುಬನಲ್ಲೆನುತಾಗ | ಹಿರಿದ ಖಡ್ಗವನು ॥ ದುಂದುಮೆ ॥

ಲಿಂಗಜಾರಿಯನು ಭಜಿಸುತಲಿ ನಡದಾನು |
ಕಂಗಳಲಿ ಕಿಡಿಗಳುದುರಿಸುತೆ ॥ ॥

ಉಪ್ಪುಂಡಿವರ ನಿನ್ನು ನೋಡಿ | ಇರಬೇಕೆಂ |
ದಪ್ಪನೆದೆಯ ಬಡಿದಾಡಿ ॥

## ೮೬

ಮುಂದಿ ಕೂಡಿಸಿ ಜನರ । ಹೊಂದಗೂಡುತೆ ನಡೆದ ।
ಹಂದಲವ ನಡಿಸಿ ಲೋಕದೊಳು ॥

ಎಡಬಲ ನೋಡುತೆ । ನಡೆದ ಕಿತ್ತೂರ ಪುರ ।
ದೊಡೆಯನಡಿಗಳನ್ನು ಸ್ತುತಿಮಾಡುತೆ । ನಂದ
ಗಡ ಖಾನಾಪೂರದಿ ದಳವು ಕೂಡುತೆ । ಅಃ
ರೊಡಗೂಡಿ ವೂರುಗಳನು ಸುಡುತೆ ॥

ಗಡಬಡಿಸುತೆ ।
ನಾಡನಡುಗುತೆ ।
ಕೇಡ ಮಾಡುತೆ ॥ ಹೊಂಟ ।

ರಡವಿ ವೂರೊಳು ಮುಂದೀ ಕಡಿವುತಲಿ । ಬಂದೂ ।
ಕಡರಿ ಸೆದೆಯೊಳ್ ಮದ್ದು ಜಡಿವುತಲಿ । ನಿಂತು ।
ಹೊಡೆಯಲೊಡಲ ರಕ್ತ । ಸಡಲಿ ನೆಲದಿ ಬಿದ್ದು ।
ಬಡಕೊಂಡೊದರಿ ಬಾಯಿ । ಬಿಡುತಳಲುತಲಿ ॥ ದುಂದುಮಿ ॥

ದಂವಲವ ನಡಿಸಿ ಲೋಕದೊಳು ರಾಯಣ್ಣನು ।
ಬಂದಿಯೊಳಗಿರಿಸಿ ಜನರನ್ನು ॥

ಕುಂಪಣಿ ಸರದಾರ್ರು ಕೇಳಿ । ಹುಡುಕುತೆ ।
ಗುಂಪಾಗ್ಹೋಗಲು ಕೋಪತಾಳಿ ॥

## ೮೭

ಬಂಡು ನಡೆದಿತು ಯೆಂದು । ದಂಡು ಸರದಾರ್ ಕೂಡಿ ।
ಕೊಂಡು ಹೊಂಗಲದಿ ಬರುವುತಲಿ ॥ ॥

ಬಂದ ಕ್ಷಣದೊಳಾಗ । ಹೊಂಡೆಂದೀರವ್ವಗೊಳ್ಳೀ ।
ಚೆಂದ ಮೇಣೇವ ತಂದು ಮುಂದಿಡಲು । ಕುದುರಿ ।
ಹಿಂದು ಮುಂದೆಡಬಲ ಹೊಂದಿರಲು । ಪಾರೀ
ಬಂದುಕ ಕವಾಯ್ತುದ ಬಾರಿರಲು ॥

ಅತ್ತೀ ನೋಡೂಳು ।
ದುಃಖ ಮಾಡೂಳು ।
ಕಿತ್ತೂರ್ ನಾಡೊಳು ॥ ಬೇಡಿ ।

ಬಂದೆನ್ನಿಂತದ ನಾನು ಬಂದಿನೊಳು । ಹೋಗೂ ।
ದೆಂದಳಲುತೆ ಈಕಿಷ್ಕಿಂಧದೊಳು । ಎಷ್ಟು ।
ಹಿಂದೆ ಮಾಡಿದ ಪಾಪ । ಬಂದಿತೆನಗೆ ಭೋ ।
ರೆಂದೆನುತಳುತೆ ತಾ । ಬಂದಳಂಗಣಕೆ ॥ ದುಂ ॥

ಕೊಂಡು ಹೊಂಗಲದಿ ಬರುವುತಲಿ ಮೇಣೆದೊಳಾಗ ।
ಗಂಡನನು ನೆನೆವುತಡರಿದಳು ॥ ॥

ತಿರುಗಿ ನೋಡಿದಳತ್ತೀ ಮುಖವ । ಸೊಸಿಯಾಗಿ ।
ಕಾಣಲಿಲ್ಲೆಳ್ಳಷ್ಟು ಸುಖವ ॥

೮೮

ಬಾಯಿದೆರೆದ್ಹೇಳಿದಳು । ತಾಯಿ ಚೆನ್ನವ್ವನು ।
ದಯಮಾಡಿರೆಂದಳವರಿಗೆ ॥ ॥

ಎತ್ತ ಒಯ್ವಿರಿ ನಾವಿ । ನ್ನತ್ತ ಸೊಸಿಗಳಿಲ್ಲಿ ।
ಜತ್ತೀಲಿರುವೆವ್ಹತ್ತೆಗರೆವುತಲಿ । ಹಸ್ತ ।
ಎತ್ತಿ ಪೇಳುವೆ ನಿಮ್ಮ ಗೊತ್ತಿನಲಿ । ಈಗಿ ।
ರುತ್ತೇವೆಮಗೆ ಬಲು ಒತ್ತರಲಿ ॥

ಅಗಲಿಸಿರುವುದು ।
ತಗಬಗಿಗೊಳಿಸೂದು ।
ಹಗಲಿರುಳಳಿಸೂದು ॥ ಸರದಾ ॥

ರುತ್ತವು ರೆನ್ನ ಕಾಯ್ವುದ್ಸೊತ್ತಿನಲಿ । ಧ್ಯಾನಿ ।
ಸುತ್ತೊದರಿಂದರವ ರೊತ್ತಿನಲಿ । ಕೇಳ ।
ದೆತ್ತಿ ಮೇಣೆವ ಭೋಯೂ । ರ್ಧೊತ್ತರವರ ಸುತ್ತೂ ।
ಮುತ್ತು ಕುದುರಿ ಮುಂದಿ । ಒತ್ತರದಿ ನಡೆದು ॥ ದುಂ ॥

ದಯಮಾಡಿ ಬಿಡಿರೆಂದು ಅವರಿಗೆ ಪೇಳಿದರೆ ।
ಸಯುಗುಣವುದಿಸದಲೆ ತೆರಳಿದರು ॥

ಬಂದರ್ಧೊಂಗಲವನ್ನು ಬಿಟ್ಟು । ವೀರವ್ವನ ।
ತಂದರಭಯವನು ಕೊಟ್ಟು ॥

೮೯

ಗಂಡ ಮಾವರ ಭಾಗ್ಯ । ವುಂಡೇನೆಂದರೆ ಕುಂಪಣಿ ।
ದಂಡಿನೊಳು ಸಿಕ್ಕೆನೆನ್ನುತಲಿ ॥ ॥

ಒರೆಯಲಿನ್ನೆಷ್ಟನಾ । ಹಿರಿಯ ಮಾವನು ಗಳಿ ।
ಸಿರುವ ದೌಲತ್ತು ಈ ನರರೊಳಗೆ । ಕಾಣೆ ।
ಸುರಪ ದಾನವದೊಳು ಸುರರೊಳಗೆ । ಮಲ್ಲೇಂ ।
ದ್ರರ ಸರಿಯಿಲ್ಲೀ ಭೂತಳದೊಳಗೆ ॥

ಮುತ್ತು ಮಾಣಿಕ ।
ರತ್ನವರ ಪದಕ ।
ತೆತ್ತಿಸಿರುವದಕ ॥ ದೊಡ್ಡ ।

ಸರಗಿ ಪುತ್ಥಳಿ ನೆಲ್ಲೀಸರ ಜೋಮಾಲಿ । ತರ
ತರ ಮೋಹನ್ಮಾಲಿಗಳ್ ಕೊರಳತಾಳಿ । ಒಂಕಿ
ಹರಡೆ ತೊಳ್ ಬಾಪುರಿ । ಸರಮುತ್ತು ಚಿಂತಾಕ ।
ಶಿರಪೇಚೊಜ್ರವು ಕಂಠೀ । ಸರ ತುರಾಯಿಗಳು ॥ ದುಂ ॥

ಕಂಡಿನೋಳು ಸಿಕ್ಕೆನೆನ್ನುತಲಿ ವೀರವ್ವನು ।
ಗಂಡನೈಶ್ವರ್ಯ ಹೊಗಳುತಲಿ ॥ ॥

ದುಃಖ ಮಾಡುತ ನಡೆದಾಳು । ಧಾರ್ವಾ
ಡಕ್ಹೋಗಿಳಿದು ಕುಳಿತಾಳು ॥

೯೦

ತಡವು ಮಾಡದಲೆ ತಾ । ಜಡಜ ಸಾಹೇಬರಲ್ಲಿ ।
ಬಿಡದೆ ಅಪ್ಪಣೆಯು ಕೊಡುವುತಲಿ ॥ ॥

ನಿಲ್ಲದೆ ಮೇಣೆದೊ । ಳಲ್ಲಿ ಕುಳಿತೀರವ್ವ ।
ಮಲ್ಲಸರ್ಜನ ನೆನೆನೆನೆದಳುತೆ । ತನ್ನ ।
ವಲ್ಲಭ ಮೈದುನರಿಲ್ಲೆನುತೆ । ಹೊಂಗಲ ।
ದಲ್ಲಿ ಬಿಟ್ಟೆನು ಅತ್ತಿ ವೊಲ್ಲಿನುತೆ ॥

ಇವರೆಲ್ಲಾರು ।
ಶಿವನನ್ಹೊಂದ್ಯಾರು ।
ನನಗೆ ಮುಂದ್ಯಾರು । ಗತಿ ।

ಇಲ್ಲೆನುತಾ ಮೇಣೇದಲ್ಲ್ಯಳಲು । ಕುಸೂ ।
ಗಲ್ಲಿಗೊಯ್ಯಲು ಬಾಯಿ ಬಿಡುತಿರಲು । ಕಿಲೇ ।
ದಲ್ಲಿಡಲೆಡಬಲ । ಜೆಲ್ಲಿ ಕುದುರಿ ಸುತ್ತು
ಅಲ್ಲಲ್ಲಿ ಕಾವಲ । ನಿಲ್ಲಿಸುತಾಗ ॥ ದುಂ ॥

ಇಡಪೆ ಅಪ್ಪಣೆಯು ಕೊಡುತಲೀರವ್ವನು ।
ಗಡ ಕಿಲೆದೊಳ್ದೊರಳಿ ಬೀಳುತಲಿ ॥ ॥

ತಪ್ಪಿಲ್ಲದೆನ್ನಸಿಲ್ಲಿಟ್ಟ । ರಿಂದೆದೆ ।
ದಪ್ಪನೆ ಒಡಕೊಂಡಳಿಷ್ಟ ॥

೯೧

ತಂದೆ ತಾಯಿಗಳು ಮ । ಲ್ಲೇಂದ್ರನೈಶ್ವರ್ಯ ನೋಡಿ ।
ಹೊಂದಿಸಿದರಿವರು ಕಾಣಿಸದೆ ॥ ॥

ಪ್ರಥಮದೊಳ್ ಕಿತ್ತೂರ । ಪತಿ ಮಲ್ಲಸರ್ಜನ ।
ಸತಿಯು ಸುತರು ಸೊಸ್ತೇರ್ಹಿಂಡುಗಳು । ಮೇಲು ।
ಮತಿಯುಳ್ಳ ಸಿಪ್ಪತ್ತರ ತಾಂಡೆಗಳು । ಎರಡಾ ।
ರತಿ ಸಹಸ್ರ ಕಾಲ್‌ಬಲ ದಂಡುಗಳು ॥

ಕೊಡಿಗಳು ಛತ್ರ ।
ಆಡುವರು ಪಾತ್ರ ।
ನೋಡುವರು ನೇತ್ರ ॥ ತೆರೆದು ।

ಆಪತ್ತಾಗೇರಿಯು ಪಲ್ಲಕ್ಕ್ಯ ಹತ್ತುತಲಿ । ಮುನಿಸಿ ।
ದಪ್ತರ್ ದಿವಾನರು ಮುತ್ತುತಲಿ । ಚಾಮ ।
ರೆತ್ತಿ ಢಾಳಿಸುತಿರೆ । ಹಸ್ತಿ ಕುದುರಿ ಡಂಕೆ ।
ಒತ್ತಿ ಚೀರುವ ಕಾಳಿ । ರಣಬಾಜಿ ಧ್ವನಿಯು ॥ ದುಂದುಮೆ ।

ಹೊಂದಿಸಿದರಿವರು ಕಾಣಿಸದೆ ಇಂಗ್ರಜರ ।
ಬಂದಿಸೊಳಗಿರುವದಾಯ್ತೆನಗೆ ॥

ಅತ್ತಿಮಾವನ ಪುಣ್ಯಾ ತೀರಿ । ತಿಂದಿಗೆ ।
ಸುತ್ತಲಿಟ್ಟರೆನಗೆ ಪಹರಿ ॥

೯೨

ನಲ್ಲ ಮೈದುನರಿದ್ದ । ರಿಲ್ಲಿ ಬಿಡುವರಿ ಯೆನ್ನ ।
ಸಲ್ಲದೆನಿಂಗ್ರಜರಿಗೀಗೆನುತೆ ॥

ಸ್ರಷ್ಟಿಯೊಳ್ಹೆಣ್ಣಾಗಿ । ಹುಟ್ಟಬಾರದು ಬ್ರಹ್ಮ ।
ಮುಟ್ಟಿ ಬರೆದ ಯೆನ್ನ ದೃಷ್ಟವನು । ಬರೆ ।
ದಿಟ್ಟನೇನಿದಕಾಗಿ ಭ್ರಷ್ಟವನು । ಬಳಗ ।
ಸುಟ್ಹೋಗಲೆನುತ್ತಿಂಗ ಕೊಟ್ಟವನು ॥

ಜನ್ಮ ಜರಿವೆನು ।
ಯೆನ್ನ ಪರಿವೇನು ।
ಅನ್ನ ತೊರೆವೆನು ॥ ನಾನು ।

ಹುಟ್ಟಿ ಬಂದುದನರ್ಥ ಕೆಟ್ಟಿತಲ್ಲ । ಕಂಪ್ಣಿ ।
ದಿಟ್ಟರ ದಯವೇನು ಹುಟ್ಟಲಿಲ್ಲ । ಬಿಡು ।
ಒಟ್ಟಗಿನ್ನೇ ನಾದು । ದ್ಹೊಟ್ಟೆಯೊಳಗೆ ಕಿಚ್ಚು
ಹುಟ್ಟಿತು ಜೀವವ । ಬಿಟ್ಟರೆ ಲೇಸು ॥ ದುಂ ॥

ಸಲ್ಲಿದೆನು ಇಂಗ್ರಜರಿಗೀಗೆನುತ ವೀರವ್ವನು ।
ಬಲ್ಹಾಂಗ ದುಃಖ ಮಾಡಿದಳು ॥ ॥

ಎರವಾದೆನೆಲ್ಲರಿಗೀಗ । ಒಬ್ಬಳೀ ।
ಪರದೇಶಾದೆನು ಕಿಲೆದಾಗ ॥

೯೩

ಎಷ್ಟು ಬಳಲಿದರೆನ್ನ । ಕಷ್ಟ ಬಿಡಿಸುವರಿಲ್ಲ ।
ಸೃಷ್ಟಿಪತಿ ಪಾಲಿಸುವದೆಂದು ॥

ಹರನೆ ಸಕಲಲೋಕೋ।ದ್ಧರನೆ ಕೈಲಾಸವಮಂ।
ದಿರನೆ ಗೌರೀವರನೇ ಯೆನುತ। ಕೃಪಾ।
ಕರ ಶಂಕರನೆ ಜಿತಸ್ಮರ ಎನುತ। ಗಂಗಾ।
ಧರನೆ ಶಿವನೆ ಪುರಹರ ಎನುತ ॥

ಹರಹರ ಎಂದು।
ಮರುಗುತಲಂದು।
ಉರಿಯೊಳು ಬೆಂದು। ಚಿಂತಿ।

ಬೆರಸಿತೆನ್ನೊಳು ಪರಿಹರಿಸುವದು। ಜೀವ।
ವಿರದೆ ನಿನ್ನಡಿಗಳ ಸ್ಮರಿಸುವದು। ನಿನ್ನೊಳ್।
ನೆರವಿಕೋ ಹೊಂಗಲ। ದರಸು ವೃಷಭರಾಜ।
ಸರಿ ನಿನ್ನೊರತು ಮತ್ತ್ಯಾ। ರ್ನರಿಯೆ ಲೋಕದಲಿ ॥ದುಂದುಮೆ॥

ಸೃಷ್ಟಿಪತಿ ಪಾಲಿಸುವದೆಂದು ಆಕೆ ಮನ।
ಮುಷ್ಟಿ ಸ್ತುತಿಸಿದಳು ಹಗಲಿರುಳು ॥

ಹಸಿವು ತೃಷೆಗಳನು ಬಿಟ್ಟು।ಇರುವಳು।
ಕುಸುಗಲ್ಲಿನೊಳು ಧ್ಯಾನಗೊಟ್ಟು ॥



॥ ಶ್ರೀ. ಕಿತ್ತೂರ ಮಲ್ಲಸರ್ಜನ ದುಂದುಮಿ ಸಮಾಪ್ತ. ॥

———

# ಲಾವಣಿ ಪದ.

## ೧

ಕಿತ್ತೂರ ಚನ್ನವನ ಸೋಸಿ ।, ಹೊಂಗಲ ಬಿಟ್ಟು
ಹೋಗುವಾಗ, ಮಾಡತಾಳೆ ಮಾಹದುಃಖ ।
ಮತ್ತ ನಮ್ಮ ಮಲ್ಲಸರ್ಜ, ಸತ್ತುಹೋಗದಿದ್ದರಿಂತು,
ಹೊತ್ತುಹೋಗುದೇಕೆ ನಮ್ಮ ಬದಕ ॥ ಧೃಪದ ॥

ಮಲ್ಲಸರ್ಜ ಮಾಡಿದ ಬದಕು, ಮಾಜದೆ ನಾ
ಪೇಳುವೆನು, ಸೋಜಿಗದ ಬದಕೆಲ್ಲ ಸೂರಿ ।
ಆರುಆನೆ ಹದಿನಾರು ಒಂಟೆ, ಹನ್ನೆರಡು ಸಾವಿರ
ಕಾಲಬಲ, ಮಾರಾಯ ತೋಪುಗಳು ಹೋದವು ಹೇರಿ ।
ಹತ್ತುಮೋಲಿ ಮುತ್ತಿನ ಪಾಲಕಿ, ಸುತ್ತಲು
ಹಿಡಿವಂಥ ಬೆಳ್ಳಿ ಕಾವಿನ ಏಳೆಂಟು ಆಪ್ತಾಗಿರಿ ।
ಚಂದದಿಂದ ಚಕ್ಕಡಿಗಳು, ಒಂದು ಉಳಿಯದೆ
ಹೋದವು, ತುರಂಗ ರಥ ಚಾಮರಿ ।
ಸಿಟ್ಟಿನ ಸಿಪಾಯಿಗಳೆಲ್ಲ, ಧಿಟ್ಟತನದಲಿ
ಹತ್ತುವಂಥ, ಕುದುರೆ ಇದ್ದವಲ್ಲಿ ಜರದಾಮರಿ ।
ಹಂತಿಲಿದ್ದ ಸರದಾರೆಲ್ಲ, ಕಾಂತಾರ ಬಿದ್ದ
ಹೋದಾರು, ಎಂಥದು ಬಂದಿತು ನೋಡು ಮಾರಿ ।
ಕಲ್ಲೂರ ಕಲಬಸಪ್ಪಾ, ಕನ್ನೂರ ಮಲ್ಲಪ್ಪಾ,
ಅವರಾದಿ ಈರಪ್ಪಾ, ಇದ್ದಾರು ಕಾರಭಾರಿ ।
ಅಷ್ಟುಹೋಗಿ ಇಷ್ಟುಆಯಿತು, ಕಷ್ಟ ನಮಗೆ
ಬಂದಿತೆಂದು, ಕಂತುಹರನ ನೆನೆವಳು ಸಾರಿ ॥ ೧ ॥

[ ಪಾಂಡವರಿಗೆ ವನವಾಸ ಬದಂತೆ ಆದಿತೋ
ಪಾಪಿ ದುಃಶಾಸನನು ದ್ರೌಪದಿ ಸೀರೆಯ ಸೆಳೆಯಲು,
ಭೂಪತಿಗಳೇನು ಮಾಡಿದರು ।

ನಮ್ಮ ಸೆರೆ ಬಿಡಿಸುವರು ಇನ್ನೊಬ್ಬರಾರಿಲ್ಲ, ಸಿಕಿಯಾದ ಮಗ
ನೊಬ್ಬಸಿಗದೆ ಹೋದನು

ಅವನ ಬಗೆದು ತರುವೆನೆನ್ನುವರು, ಪಾಪಿಕೇಳೋ
ನಮ್ಮಂಥಪಾತಕರಾರಿಲ್ಲ

ಪನ್ನಂಗಧರನಸ್ತುತಿಸುತಲಿ ಈರವ್ವ ಪಾರ್ವತಿಯರಸಗೆ ಹೇಳಿದಳು]

॥ ಪೂರ್ವ ಜನ್ಮದ ಲಿಖಿತ ಪೂರ್ಣ, ನಮಗೆ ತಪ್ಪದೆಂದು
ಬ್ರಹ್ಮ, ನೇಕೆ ಬಡೆದಾಸಿಂತಾಃಬರಿ ॥

೨

ಹೆಣ್ಣು ಮಕ್ಕಳಿಡುವ ಒಸ್ತ ಬಣ್ಣಿಸಿ ನಾ ಪೇಳುವೆನು
ಸಂಣ ನಡುವಿನ ಡಾಬು ಬಳಿ ಬಂಗಾರ ।

ಬುಗಡಿ ಬಾವುಲಿ ಜಮಕಿನ ವಾಲಿ, ಚಳತುಂಬ
ಚಂದದಲ್ಲಿಡುವ, ರಾಗುಟಿ ಚೌರಿ ಹೆಳಲು ಬಂಗಾರ ।

ಸಾವಿರ ಹೊನ್ನಿನ ಸಂದಾಳಿಗಳು, ಮೋಹರದ ಮುತ್ತಿನ
ಮೂಗುತಿ ಮೇಲೆ ಕೆಚ್ಚಿಸಿದ ವಜ್ಜರ ।

ಕಂಠಕೆ ಧರಸುವ ಕರಡಿಗಿ ಸರಪಳಿ, ಕಟ್ಟಾಣಿ
ಕರಿಮಣಿ ಡೋರಿ ಚಿಂತಾಕ ಹರಡೆ ಹವಳಸರ ।

ಓರಿಪಿಲ್ಲಿ ಕಿರಿಪಿಲ್ಲೆಗಳು । ಲುಲ್ಲು ಮೆಂಟಿಕಿ ರುಳಿಯುಗೆಜ್ಜಿ
ಕಾಲಕಡಗ ಕಾಲಸರಪಳಿ ಕಾಲುಂಗರ ।

ಮಂಡಲಧರನ ಕರುಣ ತಪ್ಪಿ ಒಂದು ಉಳಿಯದೆ ಹೋಯಿತು
ಮುಂದೆ ನಮಗಿಲ್ಲೊಆಸರ ॥ ೦ ॥

ಒಕ್ಕಲಗಿತ್ತಿರು ಸಕಲಕ್ಕೆ ಜಾಣೆರು । ಸತ್ತಿಕ ಶರಣರ ಸಾಕ್ಷಿ
ಹೇಳುವೆ ನಾನು । ಅಕ್ಕ ನಿಲ್ಲಿಪ

ದುಃಖ ಎನುತಾ । ರಾಮುಲಕ್ಷ್ಮಣರು ಪ್ರೇಮುದಿಂದಿರ್ದರು ।
ಕೆಟ್ಟರಾವಣ ಜಾನಕಿ ಒಯಿದು ವನದೊಳಗಿಟ್ಟ ।
ಹನುಮ ಹೋಗಿ ಲಂಕೆಯು ಸುಟ್ಟಾ ।

ವಿಭೂಷಣಗೆ ಆದಿತು ಪಟ್ಟ । ಹೊನ್ನಸಿಕೆಯನೆ ಕೊಟ್ಟಾ ।
ಹಿಂಡ ದೈತ್ಯರನ್ನೆಲ್ಲಾ ಬಂಡು ಮಾಡುವ ಭೂಪ
ತಾಯಿ ತಂದಾನು ಕುಲದೀಪಾ ॥

ಹೋದಂಥ ಮಗನು ನಿಮಗೆ ಆದಾನೆ ತಾಯಿಯೆನುತಾ ।
ಭೇದಿಸಿ ಹೇಳಿದರು ಎಲ್ಲರು

೩

ಹೊಮವಂತಃ ಹೊದಕಿಗಳ । ಭೇದವ ನಾ ಪೇಳುವೆನು ।
ಹೋಗಾವು ರಾಜೇದ ಮೇಲೆ ಹೇರಿ ।

ರಾಣೇರುಡುವ ರಾಗಾವಳಿ ಶೀರಿ । ಬಾಲೆರುಡುವ ಬಾಳಿ ।
ಪಟ್ಟೆಶೀರಿ । ಚದುರೇರುಡುವ ಚಂದ್ರಕಾಳಿಶೀರಿ ।

ಸಣ್ಣವರುಡುವ ಸಾಸವಿ ಬಣ್ಣದಶೀರಿ । ಹುಡಿಗೇರುಡುವ
ಹೂವ್ವಿನಶೀರಿ । ಕನ್ನೆರುಡುವ ಕಂಬಾಯತಿ ಶೀರಿ ।

ಮಕ್ಕಳುಡುವ ಮಂಜಿನ ಶೀರಿ । ತೊತ್ತುಗಳುಡುವ
ತೋಪಿನಶೀರಿ । ಉತ್ತಮರುಡುವ ವುಳ್ಳಿಗೆರೆಯ ಶೀರಿ ।

ಕುಸುಗಳ್ ಹೊರುವ ಕುಲಾಯ ಕೊಂಚಿಗೆ । ಎಸಂತ
ನಾ ಪೇಳಲಿ । ಬಿಂದಲಿ ಅರಳೆಲಿನಾಗಮುರಿ ।

ಶಲ್ಗೆವು ಮುಂಡಾಸ । ಶಾಲು ಶಕಲಾತಿ ಪಚ್ಚದಂಗಿ ।
ಪಾವಡ ದೋತರ ನಾಗಪುರಿ ।

ಎಲ್ಲಾ ಹೋಗಿ ಇಲ್ಲದಾಯಿತು । ಮಲ್ಲಸರ್ಜ ಮಾಡಿದ ಬದಕು ।
ಬಲ್ಲಷ್ಟು ಹೇಳುವೆ ಅದರ ಸೂರಿ॥ ೦ ॥
ಆಷ್ಟು ಹೋಗಿ ನಮ್ಮ ಕಷ್ಟ ಬಿಡಲಿಲ್ಲಯ್ಯ ।
ತಟ್ಟನೆ ನೆಲಕ ಹಣಿಬಡವೂತೀರವ್ವಕಟ್ಟಿ ।
ಹಾಯುವೆನು ಆಲಿಗೇನುತಾ । ತೊತ್ತುಗಳೆಲ್ಲರೂ ।
ಸುತ್ತಲಿ ಮುತ್ತಿದರೂ ।
ಮುಕ್ಕಣ್ಣ ಹರನ । ದಯದಿಂದ ನಿಮಗೆ ।
ಮಕ್ಕಳದಾರೆ ತಾಯಿಯೆನುತಾ ।
ತಮ್ಮ ನಯಿದಾಸೆ ತಾಯಿ । ನಮಗ ಬಂದದ್ದೇನೆಂದು ।
ವುಮ್ಮಾಯದಿಂದವರುಹೇಳಿದ । ರೀರವ್ವ ಸುಮ್ಮನಿರದೆ ಅಳುತಾಳೆ ॥
ಹನ್ನೆರಡು ಸಾವಿರದಂಡು । ಹರದುಹೋಯಿತು ।
ನಮ್ಮನಬಿಟ್ಟು । ಒಡಿದಂತೆ ತುಂಬಿದಕೆರಿ

೪

ಹಂತಃ ದೋರಿಗಳಿಗೆಂಥದಾಯಿತು । ಕಂತುಹರನೆ
ಕೇಳೋಅವರಿಗೆಂಥ ಹೊತ್ತು ಬಂತುಈಶ್ವರ ।
ನಾಡನಾಳು ದೊರಿಗಳಿಗಿಂಥ । ಕೇಡು ಬರಬಾರದೆಂದು ।
ಕಿತ್ತೂರ ನಾಡೆಲ್ಲ ಮರಗಿತು ಮರಮರ ।
ಮನ್ನೇರು ಆಳುವಂಥ । ಹನ್ನೆರಡು ಕರೂತಿ ಹಳ್ಳಿ ।
ಹುನ್ನರದಿಂದ ಎತ್ತು ಹೇರಿ ಹೋದಾವು ಮುನ್ನರ ।
ಸತ್ತಿಕ ಶ್ರಾವಣಮಾಸಕ್ಕೆ । ಎಪ್ಪತ್ತುಯೊಳ್ಳರು ಮಂದಿ ।
ಸ್ತುತಿಮಾಡುವರು ಜಂಗಮರ ।
ಹಸ್ತಿನಂದರೆ ಕಿವಿಲೆ ಕೇಳದೆ । ಹಣ್ಣು ಸಕ್ಕರಿ ಉಣಿಸಿ ।
ದಾನಕೊಡುವರನ್ನವಸ್ತ್ರರ ।
ಧರ್ಮ ಮುಳುಗಿ ಕರ್ಮ ಹೆಚ್ಚಿತು ಮರ್ಮವೆತ್ತಿ।
ಪೇಳುವೆನು ವರ್ಮಸಾದಿಸಿ ಹೋದಗು ಮುವರ ॥ ೦ ॥

ರಾಜಕ್ಕೆ ರಾಯನಾಯಿಕ |ಇಂಥಗೊಜು ಹಚ್ಚದಿದ್ದರೆ | ಬೋಜಾಗಿ ಈ
ದವಲತ್ತು ಸಾಗಿ ಹೋಗುವದೆಂದು
ಮಾಜನರೆಲ್ಲ ಮರಗಿವರು |
ಪಟ್ಟಗಟ್ಟಿ ದೇಸಾಯಿಗೆ ಸಿಕೆಯನ್ನ ಹಾಕಿವರೆಂದು ಅತ್ತಿ
ಚನ್ನವ್ವನ ವೈದು ಹೊಂಗ್ಲದಲ್ಲಿಟ್ಟರು |

ಸಾಕಿದ ಮಗನೆನ್ನುವರೂ ಟಾಕರ ಸಾಹೇಬ ಬಂದು |
ತಾರಾಗಿ ಮಡಿದಾನು |
ದೀರರ್ದರೊಳ್ ಹುಟ್ಟಿ ಊರತಕ್ಕೊಂಡರೆಂದು
ಬೋರಿಡುತ ಜನರು ಅಳುವರು |
ಆಕಾಶದಲ್ಲಿ ಚಂದ್ರ ಲೇಸಾಗಿ ಬೆಳಕದೋರುವನು |
ಏಸಿದ್ದರೇನು ನಕ್ಷತ್ರ

೫

ವೇಳೆವೇಳೆಕ್ಕೆ ಉತ್ರವ ಹೇಳಿ ಬರೆದಾರು
ನಾಳೆ ಹೊಂಡೆಂಬುವತ್ತರ |
ಒಡವಿವಸ್ತುವನೆಲ್ಲ ವುಚ್ಚಿ ಪೊಡವಿ ಮೇಲೆ ಒಗದಾಳೋ |
ಅಬ್ಬರಿಸಿ ಸುರಿಸುವಳು ಕಣ್ಣೀರ |
ಸದಲ ಹೇರು ಬಂಡಿಗಳೆಲ್ಲಾ ಸಾಗಿ ಮುಂದಕೆ ನಡದವು |
ಬಿಟ್ಟು ಹೊಂಡಂದರಣ್ಣಾ ದನಾಕರ |
ಹತ್ತುವಂಥಾಕುದರಿಗೆಲ್ಲಾ ಮುತ್ತಿನ ಜೀನವ ಬಿಗಿದು |
ಮುಂದ ಹಿಡದ ನಡದಾನೋ ಸ್ವಾರ |
ಗುರುವಿನ ಕರಸಿ ಪಾಲಿಕಿ ತರಸಿ ಅಪ್ತಾಗಿರಿ ಮೇಲೆ ಹಿಡಿಸಿ |
ಹಾರಸ್ತ ನಡದಾರು ಚೌರಿ ಚಾಮರ |
ತೊತ್ತುಗಳೆಲ್ಲಾರು ಎತ್ತು ಕುದರಿ ಹತ್ತಿಕೊಂಡು
ಹೇರಿದಾರು ಬೆಳ್ಳಿ ಬಂಗಾರ ||
ಸಣ್ಣ ಮಗಳಯ್ಯಾ ನಾನು ಸಾರಿ ನಾನು ಪೇಳುವೆನು
ತಪ್ಪ ಕೇಳೋ ಅಪ್ಪಾ ನರದಾರ || ೦ ||

ಹೊಂಡೆಂದು ನಿಂತರೆ ಮುಂಡಾಟ ಹಿಡದಾಳು
ಬಂಡಾಟ ಮಾಡಿ ಕೈ ಹಿಡಿದವರು ।ಎಳಿವಾಗ
ಕಂಡವರ ಕಾಲ ಹಿಡಿದಾಳು ।
ಮುಂಡಲನಾಳುವಂಥ ಪುಂಡರು ಮುಡಿದಾಗ್ಯ ।ಕೆಂಡವ
ಹಾಯ್ದು ಪ್ರಾಣಕೊಲಿಲ್ಲೆಂದು ಗಂಡನನೆನೆದು ಅಳುವಳು ॥
ನೀರು ಇಲ್ಲದ ಮಲ್ಲಿಗಿ ಗಿಡವ ಬೇರು ಒಣಗಿದಂತೆ
ಆದಿತ್ತೈ ನಮ್ಮ ಸಂಸಾರ ।

೬

ಎಷ್ಟು ಮಾಡಿದರೆ ನಮ್ಮನ ಬಿಟ್ಟು ಹೋಗುವದಿಲ್ಲೆಂದು
ಮಾಡಿದಳು ವೀರನಸ್ತುತಿ ।
ಅತ್ತಿಯಾಮಾವನ ನೆನಿಸಿ ಹತ್ತಿದಳು ಡೋಲಿಯನ್ನು
ಹೊತ್ತಾರಣ್ಣಾ ಬೋವೆರು ಎತ್ತಿ ।
ರಾಯ ನಾಯಿಕ ಬಂದನೆಂದು ದವಡ ಮಾಡಿ
ನಡದಾರಣ್ಣಾ ಎಡ ಬಲಕ ಹಿರದಕತ್ತಿ ।
ಹಿಂದ ಇನ್ನೂರ ಬಾರಿನ ಮಂದಿ ಮುಂದ ಇನ್ನೂರ ಕುದರಿ
ಮುಂದಿ ಮಾಡುತ ನಡದರಣ್ಣಾ ಪಾರಗಸ್ತಿ।
ಜ್ಯಾಸೂದರಿಂದ ದಾರಿ ಹಿಡಿದು ಧಾರವಾಡಕ್ಕೆ
ತಂದು ಸರದಾರ ಕೇಳ್ಯಾನು ಅವರಸ್ಥಿತಿ ।
ರಾತ್ರಿಲೆ ರಾಯ ನಾಯಿಕನ್ನಚ್ಚಿ ರಂಗ ಮಾಡಿ
ಸುತ್ತಿನ ಹಳ್ಳಿನೆಲ್ಲಾ ಸುಲಸ್ತಿ ।
ಕೊಟ್ಟ ಅನ್ನದ ಮೇಲೆ ನೀನು ಬಿಟ್ಟು ಎರಡ್ನೆ ನೋಡತಿ ।
ಮಾಡ ಬೇಕೆ? ನಮ್ಮ ಮೇಲೆ ಜಾಸ್ತಿ ।
ಕೊಲ್ಲ ಬೇಡಿರಿ ಇಕಿನ ಕುಸುಗಲ್ಲಿನ ಕಿಲೇದಾಗ
ಒಬ್ಬಳ್ನ ಇಡೆಂದನು ಒಸ್ತಿ ॥ ೦ ॥
ಹೊತ್ತಾರೋ ಬೊವೇರು ಕುಸುಗಲ್ಲಿಗೆ ತಂದಾರೋ
ಮೆಲ್ಲನೆ ಕಿಲೆವ ಹೊಗುವಾಗ ವೀರವ್ವ

ಬಲ್ಲಾ ೞಂಗ ದುಃಖ ಮಾಡತಾಳೊ ।
ತಾಯಿಲ್ಲದ ಮಕ್ಕಳಿಗೆ । ಆಯಿಲ್ಲಾಸಿರಿಇಲ್ಲಾ ।
ಕಾಯಇಡಬಾರದೆಂದು ಬಾಯಿ
ಬಿಡುತಲೀರವ್ವ ಸಾವ ಬೇಡಿದಳು ಶಿವನಲ್ಲಿ ॥
ನೀರನ್ನಮೀನ ವೈದು । ಚೀರಿ ಹೊರಗೆ ಚಲ್ಲಿದಂತೆ
ಆದೆವೈಯ್ಯಾ ನಾವು ಆನಾಸ್ತಿ

೭

ಇನ್ನು ಈ ಧರೆಯೊಳು । ಮುನ್ನ ಇರಬಾರದೆಂದು ।
ಅನ್ನ ಉದಕ ಬಿಟಾಳು ।
ಸಂಗ್ರಾಣಿ ಬೇನಿಯಂತೆ । ಸರ್ವಾಂಗನೆಲ್ಲ ಬಣಿಗಿಸಿ ।
ಸುಣ್ಣದಂತೆ ದೇಹ ಸುಟ್ಟಳು ।
ಸಣ್ಣವಾದವು ಕರವು ಕಾಲು ಮಣ್ಣು ಪಾಲುವಾಗಲೆಂದು ।
ವ್ಯ ಬಣ್ಣ ಒಣಗಿಸಿ ಬಿಟ್ಟಳು ।
ನಾಡೊಳು ನೌವಲಗುಂದ ಕಾಡಸಿದ್ದನ್ಞಂತೆಲೆ ಹೋಗಿ ।
ನೀರು ಮಿಂದು ಮಡಿಯು ನುಟ್ಟಳು
ಭಕ್ತಿಯಿಂದ ವಿರಕ್ತರ ಕರಸಿ ತಕ್ಕಿ ತುಂಬ ಬಂಗಾರ ।
ತೆಗೆದು ದಾನ ಧರ್ಮ ಕೊಟ್ಟಳು ।
ಜಂಗಮು ತೀರ್ಥವ ಪಡೆದು ಅಂಗದೊಳಗಿನ
ತನ್ನ ಲಿಂಗದ ಮೇಲೆ ಧ್ಯಾನ ಇಟ್ಟಳು ।
ಮುಕ್ತಿ ಕೊಡುಎಂದು ಮುಕ್ಕಣ್ಣ ಹರನ ಸ್ತುತಿಸಿ
ಧಾರವಾಡ ಹಾದಿ ಹಿಡಿದಳು ।
ಚಿಕ್ಕ ಮಲ್ಲಸರ್ಜಾ ಸಿಕ್ಕನೆಂಬುದು ಕೇಳಿ । ಬಕ್ಕಾನೆ ನೆಲಕ್ಕೆ ಬಿದ್ದು
ತಾ ಹೊರಳುತಲೀರವ್ವ ಜಕ್ಕನೆ ಜರಗಿದಳು ।
ಕೊಡಹೊನ್ನಲ್ಲಿದ್ದರೇನು ಬಡಿವ್ಯಾಗಿರುವದು ಲೇಸು ।
ಮಡದಿಗೆ ರಾಯ ಮನೆಯೊಳಗಿದ್ದರೆ।
ಹಡವಿ ವಸ್ತ್ರವ ಇಡಲೇಸು ।

ಒಡವಿ ವಸ್ತುವನೆಲ್ಲ ಬಿಡದೆ ದಾನವು ಮಾಡಿ ।
ಕಿತ್ತೂರ ದೊರಿತನ ಕಿರದಾಯಿ ತೆನುತಲಿ ।
ಹರದಿ ವೀರವ್ವ ಅಳುತಾಳಿ ।

ಧಾರವಾಡಕ ಬಂದು । ಮೂರಾರು ದಿವಸ ಇದ್ದಲಿ ।
ಮರಣ ಕಾಲ ಬಂದು ಸಾಗಿದಳು

೮

ಸತ್ತಂಥ ಶ್ರವಾಯೆತ್ತಿ ಮುಖವದೊಳದು ।ವಿಭೂತಿಯ ಧರಶ್ಯಾರು ।
ಅತ್ತಿಚನ್ನವನ ಮುತ್ತಿನ ಶರಗಿನ ಶೀರಿ ಉತ್ತಮರು
ನೀರಿಗಿ ಹೊಯಿದು ಉಡಿಶ್ಯಾರು ।

ಹತ್ತೆಂಟುಸಾವಿರ ಹೊನ್ನಿನರತ್ನ ಕೆಚ್ಚಿಸಿದ ನತ್ತು ಮೂಗಿನಾಗಿಟ್ಟರು ।
ಬುಕ್ಕಿಟ್ಟು ಊದಿನಕಡ್ಡಿ ಲೆಕ್ಕವಿಲ್ಲದೆ ಸುಡವುತಲಿ
ಕಂಚಾರ್ತಿ ಕಳಸ ತುಂಬಿಟ್ಟರು ।

ಪುರಾಣ ಪುಸ್ತಕ ಕಥೆಯು ಓದುತಲಿ ಬಂದು ನೆರದಾರು ಜಂಗಮರು ।
ಮಾಯದ ಮರಣ ಆದಿತೆಂದು ಮಾನಾಡಜನರು
ಉದರೂಸುರು ಕಣ್ಣೀರು ॥ ೦

ಅತ್ತಿಮಾನಗಳಿಲ್ಲಾ । ಅತ್ತಿಗಿನಾದಿನಿಗಳಿಲ್ಲಾ । ಹೊತ್ತು ಬಂದಾಗ
ಮರಗು ಹೆತ್ತವ್ವ ಇಲ್ಲೆಂದು ತೊತ್ತುಗಳೆಲ್ಲಾ ಅಳುವರು ।

ತಂಗಿ ತಮ್ಮನು ಇಲ್ಲಾ ಅಣ್ಣ ಅಕ್ಕನು ಇಲ್ಲಾ । ಅರಮನೆ
ಯೊಳಗಡ್ಡಾಡುವರಿಲ್ಲೆಂದು ಆಲ್ ಪರಿದು ಅಳುವರು ।

ಪುರುಷನಕೂಡ ಒಂದುಕಾಲ ಸರಸನಾಡಲಿಲ್ಲಾ ।ಅರಸುಬಾಪು
ಸಾಹೇಬ ಇನ್ನೊಂದೊರುಷ ಇರಲಿಲ್ಲೆಂದು
ರಾಹುತರೆಲ್ಲರು ಅಳುವರು ।

ಉಪ್ಪಂಡ ಮಕ್ಕಳೆಲ್ಲಾ ದಪ್ಪನೆ ನೆಲಕಬಿದ್ದು ।
ಬಾಪುಸಾಹೇಬನ ಮಡದಿ ನೆನಸಿ ಅಳುವರು॥

೬

ರಾಜರಾಜವ ಮುಂದೆಲ್ಲ ರೇಜಗಟ್ಟಿ ಅಲ್ಲಿಗೆ ಬಂದು ।
ನೆರೆದಾರಳುತ ರಾಣೇರು।
ಬಲ್ಲಂಥ ಬಡಿಗೇರ ತರಿಸಿ ಇಲ್ಲದ ಸಾಹಿತ್ಯ ಕೊಡಿಸಿ
ಮಾಡಿಶ್ಯಾರೀ ಮಾನದ ವಿಸ್ತಾರ ।
ತರತರದಲ್ಲಿ ಕನ್ನಡಿಗಳು ಸಿಗುತ ಮಾಡಿಹಚ್ಚಿ
ಬಲು ಶರತ ಮಾಡಿ ಹಾಕ್ಯಾರ್ಲ್ಲುವಿನಹಾರ ।
ಸತ್ತಂಥ ಶ್ರವಾ ನಿಟ್ಟು ಹೊತ್ತು ತಾವು ನಡದಾರು
ಹಾರಸುತ ಚೌರಿ ಚಾಮರ ।
ಪುಟ್ಟಿ ಬುಟ್ಟಿಲೆ ಬುಕ್ಕಿಟ್ಟು ಕಟ್ಟವಿಲ್ಲದೆ ಹಾರುಸುತಲಿ ।
ಹಿಡದ ನಡದಾರಣ್ಣಾ ಬಾಜಾರ ।
ಹಲಿಗಿ ಕಾಳಿ ಕರ್ನಿಗಳು ಶಮಾಳ (ಸಂಬಾಳ) ಸುನಾದ
ಹಿಡಿಸೂತ ಮುಂದ ನಡದಾನು ಸರದಾರ।
ದಿಕ್ಕುದಿಕ್ಕಿನ ಜನರು ಬಂದು ಬಂದು । ವೀರವ್ವನ ನೆನೆದು
ದುಃಖ ಮಾಡುವರಷ್ಟು ಜನರ ॥ ೦ ॥
ಧಾರವಾಡದ ಮುಂದೆಲ್ಲಾ ಬೋರೆಂದು ಅಳುವರು ।ವಾರಾ
ದೊಳಗಿದ್ದ ಮಗಾ ಶಂಕರನ ನೆನವುತಲಿ
ಬೋರೇದು ದುಃಖ ಮಾಡುತಲಿ ।
ಎತ್ತು ಬಂಡಿಗಳು ಹತ್ತು ಕುದರಿಗಳು । ಸತ್ತ ಶ್ರವವ ಮುಂದೆ
ಸಾಗಿ ಹೋಗ್ವುದು ಕಂಡು ।ಶೋಕಿಸಿ ದುಃಖಾಮಾಡುವರು।
ದಾನ ಧರ್ಮವ ಕೊಟ್ಟು ನೇಮನಿತ್ಯ ತೀರಿಸಿ ।ಮುನ್ಯ ಮುಕ್ತಿ
ಕೊಡೆಂದು ಚನ್ನವನ ಸೊಸಿ ವಣ್ಣೊಳಗಿಟ್ಟು ತಿರಗಿದರು ॥
ಸುಂದರ ಹೆಬ್ಬಳ್ಳಿ ಬಸವನ ಕಂದ ಕಂಡಂತೆ
ಕವಿ ಮಾಡಿದವಿಸ್ತಾರ

॥ ಶ್ರೀ. ಶ್ರೀ. ಶ್ರೀ. ॥

———

# ಶುದ್ಧೀಪತ್ರಿಕೆ.

| ಪದ್ಯ | ಸಾಲು | ತಪ್ಪು | ಒಪ್ಪು |
|---|---|---|---|
| ೨ | ೫ | ವದಂದಿ | ವಂದದಿ |
| ೨ | ೯ | ಆತಿ | ಅತಿ |
| ೨ | ೧೨ | ತ್ರ್ಯೈಪುತ್ರಸವಃ | ತ್ರ್ಯೈಪುತ್ರರಸವು |
| ೬ | ೧ | ಮಕ್ಕಳಿ | ಮಕ್ಕಳ |
| ೬ | ೭ | ಚದರರು | ಚದುರರು |
| ೬ | ೮ | ಮಧುರರ | ಮಧುರರು |
| ೭ | ೧ | ಕಂದರರ | ಕಂದರ |
| ೭ | ೪ | ಒಪ್ಪೊ | ಒಪ್ಪುವ |
| ೮ | ೮ | ಪೋಹ | ಮೋಹ |
| ೯ | ೧೫ | ಯೆಸೆ | ಎಸೆ |
| ೧೧ | ೩ | ನಾರಿಯರ | ನಾರಿಯುರ |
| ೧೧ | ೧೪ | ವೊರೆವ | ಪೊರೆವ |
| ೧೭ | ೭ | ಭರರಿಂದ | ಭರದಿಂದ |
| ೨೩ | ೧ | ರಾಜ | ರಾಜ್ಯ |
| ೨೪ | ೩ | ತಂದೀ | ತಂದೆಯು |
| ೨೪ | ೧೬ | ಸುತ್ತಿಗಿ | ಸತ್ತಿಗಿ |
| ೩೩ | ೯ | ಮಾಯೆಯಿಡುವಳು | ಮಾಯೆ ಇಡುವಳು |
| ೩೩ | ೧೧ | ಹುಟ್ಟ | ಹುಟ್ಟಿ |
| ೩೬ | ೨ | ಬಾಬು | ಬಾಪು |
| ೩೬ | ೧೩ | ವರಿಸಬು | ವರಿಸಲು |
| ೩೮ | ೨ | ಯನಲು | ಎನಲು |
| ೩೮ | ೧೦ | ನೊಡು | ನೋಡು |
| ೩೮ | ೧೨ | ಯಿಳಿಯ | ಇಳೆಯು |
| ೩೯ | ೪ | ಬಂಥು | ಬಂಧು |

| ಪದ್ಯ | ಸಾಲು | ತಪ್ಪು | ಒಪ್ಪು |
| --- | --- | --- | --- |
| ೩೯ | ೧೩ | ಆಡಿಗೆ | ಅಡಿಗೆ |
| ೩೯ | ೧೬ | ಲಿಟ್ಟು | ಲಿಟ್ಟ |
| ೪೧ | ೧೭ | ಯೆರಡು | ಎರಡು |
| ೪೨ | ೪ | ನೊಡುತ್ತಲಿ | ನೋಡುತಲಿ |
| ೪೨ | ೧೩ | ತ್ರೋಪಗಳು | ತ್ರೋಫುಗಳು |
| ೪೫ | ೧೬ | ತುರಗಾಗಿ | [illegible] |
| ೪೬ | ೩ | ಚೆನ್ನಪ್ಪ | ಜೆನ್ನವ್ವ |
| ೪೯ | ೩ | ಸಿರಿ | ಶೀರಿ |
| ೫೨ | ೭ | ದಬ್ಬರ | ದಬ್ಬರ |
| ೫೪ | ೯ | ಮೂಗಿನ | ಮುತ್ತಿನ |
| ೫೭ | ೯ | ಭಯುವನು | ಬಲವನು |
| ೬೦ | ೧ | ಪೋಜಿನ | ಮೋಜಿನ |
| ೬೧ | ೧೧ | ರಥವು | ರಥವು |
| ೬೨ | ೧೭ | ನೇತ್ರ | ನೇತ್ರಾ |
| ೬೬ | ೧೧ | ಕೂಲಿ | ಕೂಡಿ |
| ೬೮ | ೧೪ | ಕುರಿತು | ಕುಳಿತು |
| ೭೩ | ೬ | ಸುರಿಸಿ | ಸುರಿಸೆ |
| ೭೫ | ೧೪ | ಸೋಜನರು | ಸೋಜರನು |
| ೭೫ | ೭ | ದುಃಖಿಸಿರಿವುತೆ | ದುಃಖಿಸಿರುವುತೆ |
| ೯೧ | ೬ | ಪ್ರೊಲ್ಲಿಸುತೆ | ಪ್ರೊಲ್ಲೆನುತೆ |
| ೯೨ | ೩ | ಸ್ರುಷ್ಟಿ | ಸೃಷ್ಟಿ |
| ೯೨ | ೪ | ಯೆನ್ನ | ಎನ್ನ |
| ೯೨ | ೮ | ಯೆನ್ನ | ಎನ್ನ |
| ೯೩ | ೧೫ | ಮುಷ್ಟಿ | ಮುಟ್ಟಿ |
| ೯೩ | ೧೭ | ಧ್ಯಾನ | ಧ್ಯಾನ |

## ಲಾವಣಿಯ ಬಗ್ಗೆ

| ಪದ್ಯ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೨೧ | ಬದಂತೆ | ಬಂದಂತೆ |
| ೧ | ೨೩ | ಬೂಪತಿ | ಭೂಪತಿ |
| ೧ | ೩೨ | ಬದೆದಾನಿಂತಾಃ | ಬರೆದಾನಿಂತಹ |
| ೨ | ೧ | ಒಸ್ತ್ರ | ವಸ್ತ್ರ |
| ೨ | ೧ | ವಂತಃ | ವಂತಹ |
| ೩ | ೮ | ವುಳ್ಳ | ಉಳ್ಳ |
| ೩ | ೯ | ಕುಸು | ಕೂಸು |
| ೩ | ೧೭ | ಆಲಿಗೇನುತ | ಅಲಿಗೆನುತ |
| ೪ | ೧ | ಹೆಂತಃ | ಎಂತಹ |
| ೪ | ೧ | ಪೋರಿ | ಡೊರಿ |
| ೪ | ೧೨ | ಘುವರ | ಮೂವರ |
| ೪ | ೧೩ | ಗೊಜು | ಗೋಜು |
| ೪ | ೨೦ | ದೀರ | ಧೀರ |
| ೪ | ೨೧ | ಬೋರಿಡುತ | ಭೋರಿಡುತ |
| ೫ | ೧೯ | ಕೊಲಿಲ್ಲೆಂದು | ಕೊಡಲಿಲ್ಲೆಂದು |
| ೭ | ೧ | ಘರೆ | ಧರೆ |
| ೭ | ೨ | ಬಿಟವಾಳು | ಬಿಟ್ವಾಳು |
| ೭ | ೪ | ಬಣಿಗಿಸಿ | ಒಣಿಗಿಸಿ |
| ೭ | ೨೩ | ಮುರಾರು | ಮೂರಾರು |
| ೮ | ೭ | ವುಸ್ತಕ | ಪುಸ್ತಕ |
| ೯ | ೧೫ | ಬೋರೆಂದು | ಭೋರೆಂದು |
| ೯ | ೧೭ | ಬೋರೆಂದು | ಭೋರೆಂದು |
| ೯ | ೨೧ | ವಣ್ಣೊಳ | ಮಣ್ಣೊಳ |

# ವೀರಭಾರತ ಗ್ರಂಥಮಾಲೆ ಬೆಳಗಾವಿ.

## ಮೊದಲನೆಯ ವರುಷದಲ್ಲಿ ಆರು ಪುಸ್ತಕಗಳು

**ವಿಷಯಗಳ ವಿಪುಲತೆ !** **ರಸಿಕರಿಗೆ ರಸದೂಟ !!**

ವರುಷದಲ್ಲಿ ಆರು ಉತ್ತಮ ಗ್ರಂಥಗಳು.

ವಾರ್ಷಿಕ **ವರ್ಗಣಿ ಕೇವಲ** ೨ ರೂ. ೪ ಆಣೆ. ಪ್ರಕಟವಾಗಿವೆ.

೧) **ಜನೆವರಿ ೨೬** ಲೇ. ಶ್ರೀಕೃಷ್ಣ ಪಾಟೀಲ ಬೆಲೆ: ೦-೫-೦

ಉಜ್ವಲ ದೇಶಾಭಿಮಾನದ ನಾಟಕ

೨) **ವಿಜಯಶ್ರೀ** ಲೇ. ಶ್ರೀ. ಮಿರ್ಜಿ ಅಣ್ಣಾರಾಯರು. ೧-೦-೦

ವಾಸ್ತವ ಪ್ರಪಂಚದ ಸತ್ಯಸಂಗತಿಗಳ ಸುಂದರವಾದ ಕತೆಗಳ ಸಂಕಲನ.

೩) **ಹಂಬಲ** ಶ್ರೀ. ಬೆಟಗೇರಿ ಕೃಷ್ಣಶರ್ಮರ ಮುನ್ನುಡಿಯೊಂದಿಗೆ ೧-೦-೦

ಲೇ — ಶ್ರೀ ಕೃಷ್ಣಮೂರ್ತಿ ಕಿತ್ತೂರ, B. A. ಬೆಳಗಾವಿ.

ನಗುವ, ಅಳುವ, ಮರುಗುವ, ಮನಕೊರೆಯುವ ಸನ್ನಿವೇಶಗಳ ಉತ್ತಮ ಕತೆಗಳು.

೪) **ಮಹಾತ್ಮಾ ಗಾಂಧಿಯವರ ಕೊಲೆ** ( ಪದ್ಯ ) ಬೆಲೆ: ೦-೮-೦

ಎಸ್. ಡಿ. ಇಂಚಲ ಪ್ರಿನ್ಸಿಪಾಲರು, ಕನ್ನಡ ಟ್ರೇನಿಂಗ ಕಾಲೇಜ, ಬೆಳಗಾವಿ ಇವರ ಮುನ್ನುಡಿಯೊಂದಿಗೆ

ಲೇ:— ತುಕಾರಾಮ ರತ್ನಪ್ಪಾ ಕೋಪರಡೆ.

೫) **ಸಾಕ್ಷರತಾ ಸಾಫಲ್ಯ** ೦-೫-೦

ಲೇ:— ಶ್ರೀ. ಸಂಗಮೇಶ ಗೋಲಪ್ಪನವರು.

೬) **ಕಾಂಗ್ರೆಸದ ಇತಿಹಾಸ** ದೇ. ಭ. ಗಂಗಾಧರರಾವ ದೇಶಪಾಂಡೆ ಇವರ ಮುನ್ನುಡಿಯೊಂದಿಗೆ ೦-೧೦-೦

ಲೇ:— ಶ್ರೀ. ಭಾ. ವಿ ಗೋಗಟೆ.

ಎಲ್ಲರೂ ಓದಲೇ ಬೇಕಾದ ಪುಸ್ತಕಗಳು.

—×—

ಕೇವಲ ೨ ರೂ. ೪ ಆ. ಕಳಿಸಿ ಇಂದೇ ಚಂದಾದಾರರಾಗಿರಿ.

**ಬರೆಯಿರಿ:— ದಿ ಅಜಿತ ಎಜನ್ಸಿ, ಟಿಳಕಚೌಕ-ಬೆಳಗಾವಿ.**